# ಜ್ಞಾನ ಗಂಗಾಧರ

ತತ್ತ್ವಮನನ

(ಅಧ್ಯಾತ್ಮ ವಿಚಾರಧಾರೆ)

ಬೆಂಗಳೂರು.
28-2-12

**"Jnana Gangadhara** articles written and published by Vidwan Sri Venkatesha Sharma, No. 10, Shatatara, Telecom Colony, New Timberyard Layout, Bangalore-560026. Ph : 26758888

ನ್ಯಾಯ ಸೂತ್ರಂ —
ದುಃಖಜನ್ಮಪ್ರವೃತ್ತಿದೋಷಮಿಥ್ಯಾಜ್ಞಾನಾನಾಮುತ್ತರೋತ್ತರಾಪಾ
ತದನಂತರಾಪಾಯಾದಪವರ್ಗಃ ಇತಿ

Pages : 96

Price : **Rs. 30/-**



Revised Edition : 2012

D.T.P. by
**Sumukha Associates**
8th Phase, J. P. Nagar,
Bangalore - 76.

॥ ಓಂ ಹರಿಹರಾತ್ಮನೇ ಶ್ರೀ ಭಗವತೇ ನಮಃ ॥

ದಿಕ್ಕಾಲಾದ್ಯನವಚ್ಛಿನ್ನಾನಂದಚಿನ್ಮಾತ್ರಮೂರ್ತಯೇ।
ಸ್ವಾನುಭೂತ್ಯೇಕಮಾನಾಯ ನಮಶ್ಶಾನ್ತಾಯ ತೇಜಸೇ ॥

## ದೇವನಿರುವುದು ನಿಜ - ಸತ್ಯ

ದೇವರು ಇದ್ದಾನೆಯೋ ಇಲ್ಲವೋ ಎಂದು ಏತಕ್ಕೆ ಸಂದೇಹಪಡುವಿರಿ? ಆ ದೇವನೇ ಮನುಷ್ಯಾದಿ ಸಕಲ ಪ್ರಾಣಿಗಳ ನಿಜಚೇತನನಾಗಿದ್ದಾನೆ. ಅವನೇ ಆತ್ಮನು, ಪರಮಾತ್ಮನು. ಸ್ವಯಂ ಪ್ರಕಾಶನು ಮತ್ತು ಸ್ವಯಂ ಸಿದ್ಧನಾದ ಹಾಗೂ ಸಕಲವನ್ನೂ ಅರಿಯುವ ಆ ದೇವನಲ್ಲದೇ ಬೇರೆ ಚೈತನ್ಯವಸ್ತುವೇ ಇರುವುದಿಲ್ಲವೆಂದು ಆಪ್ತರಾದ ಸದ್ಗುರುಗಳು ಮತ್ತು ಶಾಸ್ತ್ರಗಳು ತಿಳಿಸಿಕೊಡುತ್ತಿರುವರು. ಇಂತಹ ಹಿತ ಸತ್ಯ ನುಡಿಯನ್ನು ಕೇಳದವರು ಮತ್ತು ನಂಬದವರು ಆತ್ಮದ್ರೋಹಿಗಳೇ ಸರಿ. ಅಂತಹವರನ್ನು ಸಮಾಜ ವಂಚಕರು ಎಂದೇ ಭಾವಿಸಬಹುದು. ಮನುಷ್ಯಾದಿ ಪ್ರಾಣಿಗಳು ಮತ್ತು ಈ ಜಗತ್ತು ಇರುವುದೇ ದೇವರು ಇರುವುದಕ್ಕೆ ಪ್ರಮಾಣ = ಸಾಕ್ಷಿ. ಈ ಆತ್ಮಚೇತನನು ಮನುಷ್ಯರಿಗೆ ಸಾಕ್ಷಾದಪರೋಕ್ಷ ಆಗಿರುತ್ತಿದ್ದರೂ ಸುಲಭವಾಗಿ ಗೊತ್ತಾಗುವುದಿಲ್ಲ ಎಲ್ಲರಿಗೂ ತಿಳಿಯುವುದಿಲ್ಲ, ಕಾರಣವೇನೆಂದರೆ - ಮನುಷ್ಯರು ಇಂದ್ರಿಯ, ಬುದ್ಧಿ, ಮನಸ್ಸು ಎಂಬ ಪ್ರಮಾಣದಿಂದ ಅವನನ್ನು ತಿಳಿಯಲು ಯತ್ನಿಸುತ್ತಾರೆ. ಆದರೆ ಆತ್ಮನು ಅತೀಂದ್ರಿಯನು, ಅಪ್ರಮೇಯನು, ನಾಮರೂಪವಿಲ್ಲದವನು, ಮಾತು ಮನೋಬುದ್ಧಿಗಳಿಗೆ ನಿಲುಕುವುದಿಲ್ಲ, ಆತ್ಮ ಜ್ಞಾನದಿಂದಲೇ ಆತ್ಮನ ಅರಿವು ಆಗಬೇಕು. ಅನ್ಯಥಾ ಸಾಧ್ಯವಿಲ್ಲ, ಅಲ್ಲದೆ ಮನುಷ್ಯರ ಬುದ್ಧಿ ಮನಸ್ಸುಗಳು ಹೊರಗಿನ ವಸ್ತುಗಳನ್ನು ಗ್ರಹಿಸುವುವೇ ಹೊರತು ತಮ್ಮ ಹಿನ್ನೆಲೆಯಾಗಿ ಇರುವ ನಾಮರೂಪ ವಿಶೇಷವೇನೂ ಇಲ್ಲದ ಮತ್ತು ತಮಗೆ ಚೈತನ್ಯವನ್ನೀಯುತ್ತಿರುವ ದೃಗ್ ರೂಪ ಸಾಕ್ಷಿಮಾತ್ರನಾದ ಅಂತರಾತ್ಮನನ್ನು ಕಂಡುಹಿಡಿಯಲಾರವು. ಹೇಗೆಂದರೆ ಮನುಷ್ಯನು ತನ್ನ ಬೆನ್ನನ್ನು ಅಥವಾ ಹಣೆಯ ತಿಲಕವನ್ನು ತನ್ನ ಕಣ್ಣನ್ನೂ ಸಹ ನೋಡಲಾಗುವುದಿಲ್ಲ ಅಲ್ಲವೇ? ಕನ್ನಡಿಯಲ್ಲಿ ನೋಡಿ ತಿಳಿಯಬಹುದೆಂದು ವಾದಿಸಿದರೂ ಆಗಲೂ ಬೇರೆ ರೀತಿಯಿಂದಲೇ ತಿಳಿದಿದ್ದಂತಾಗುವುದು. ಆದ್ದರಿಂದ ಅಂತರಾತ್ಮನನ್ನು ಅರಿತುಕೊಳ್ಳ ಬೇಕೆಂದಿರುವವರು ಸದ್ಗುರುಗಳನ್ನು ಆಶ್ರಯಿಸಿ ಅವರ ಸದುಪದೇಶ ಶ್ರವಣ ಮಾಡಬೇಕು. ಅಧ್ಯಾತ್ಮ ವಿದ್ಯಾವಿಚಾರವೆಂಬ ಬೆಳಕಿನಿಂದಲೇ ಅಂದರೆ ಸ್ವಾನುಭವದಿಂದಲೇ ಪರಮಾತ್ಮನ ಅರಿವು ಆಗುವುದು. ಅದೇ ಸಮ್ಯಗ್ ಜ್ಞಾನವು.

ಮನುಷ್ಯನು ಇದ್ದೇ ಇರುತ್ತಾನಲ್ಲವೇ? ಈ ನರಮನುಷ್ಯನು ತನ್ನ ನಿಜ ಆತ್ಮ

ಸ್ವರೂಪವನ್ನು ತಿಳಿದುಕೊಂಡಿರುವುದಿಲ್ಲ. ತನ್ನನ್ನೇ ಮರೆತುಕೊಂಡು ನಾನು ಗಂಡಸು, ನಾನು ಹೆಂಗಸು ಎಂಬುದಾಗಿ ನಂಬಿಕೊಂಡು ಬಾಹ್ಯ ವ್ಯವಹಾರದಲ್ಲಿ ತತ್ಪರನಾಗಿರುವುದು ಸ್ವಾಭಾವಿಕವಾಗಿದೆ ಅಲ್ಲವೇ ? ಆಗ ಅವನು ಕರ್ಮಕರ್ತೃ, ಸುಖಿ, ದುಃಖಿ, ಭೋಕ್ತೃ ಆಗಿರುತ್ತಾನೆ. ಹಾಗೂ ಪ್ರೇಕ್ಷಕ* ಪ್ರಮಾತೃ ಆಗಿರುತ್ತಾನೆ. ಅಂದರೆ ಮನ ಆದಿ ಇಂದ್ರಿಯ ಪ್ರಮಾಣ ಮೂಲಕವಾಗಿ ತನ್ನ ಮುಂದೆ ಇರುವಂತಹ ವಸ್ತುಜ್ಞಾನ ಮಾಡಿಕೊಳ್ಳುವ ಸ್ವಭಾವವುಳ್ಳವನಾಗಿರುತ್ತಾನೆ. ಹೀಗೆ ಮನುಷ್ಯನು ಯಾವಾಗಲೂ ಬಹಿರ್ಮುಖಿ ನಾಗಿರುವುದರಿಂದ ಅವನ ನಿಜ ಆತ್ಮನು ತನ್ನ ಬುದ್ಧಿ ಮನಃ ಪ್ರಚಾರ ಸಾಕ್ಷಿಯಾಗಿ ಸ್ವಹೃದಯದಲ್ಲೇ ನಿತ್ಯ ಸತ್ಯವಾಗಿ ಇರುತ್ತಿದ್ದರೂ ಅವನಿಗೆ ದೂರ – ಬಹುದೂರ, ಅತ್ಯಂತ ಪರೋಕ್ಷ ಎಂಬಂತಾಗಿರುವನು, ಎಂದಾಗಲೇ ಅವನ ಆ ಆತ್ಮನೇ ಈಶ್ವರ ಎಂದಾಗಿರುವನು. ಆ ಈಶ್ವರನೇ ಕಾಲಪುರುಷನಾಗಿರುತ್ತಾನೆ. ಅವನೇ ಮನುಷ್ಯರಿಗೆ ಕರ್ಮಫಲ ಕೊಡುವ ದೇವರಾಗಿದ್ದು ಮೃತ್ಯುದೇವತೆಯೂ ಆಗಿರುತ್ತಾನೆ. ಆ ಈಶ್ವರಾತ್ಮನೇ ಸಂಸಾರೀ ನರಮನುಷ್ಯರಿಗೆ ಕರ್ಮಫಲ ಕೊಡುವ ಪ್ರಭುವು. ಹೀಗೆ ಕಾಲಕರ್ಮ ಗತಿಯಿರುವುದರಿಂದ ಸ್ವಾತ್ಮನನ್ನರಿಯದ ಮನುಷ್ಯನಿಗೆ ಅವನವನ ಕರ್ಮಫಲವಾಗಿ ಪದೇ ಪದೇ ಸುಖ ದುಃಖಗಳು ಬರುವುವು. ಪುನಃ ಪುನಃ ಜನ್ಮ ಮರಣ ಪ್ರಸಂಗವು ಬರುವುದೂ ತಪ್ಪುವುದಿಲ್ಲ. ಕರ್ಮಕೋಟಲೆಯಿಂದ ಬಿಡುಗಡೆಯೂ ಆಗುವುದಿಲ್ಲ. ಇದೇ ಸಂಸಾರ ಬಂಧನ. ಇದೇ ಮೋಹನಿದ್ದೆಯಲ್ಲಿ ಕಾಣುವ ಸ್ಥಿರ = ದೀರ್ಘ ಸ್ವಪ್ನವಾಗಿರುತ್ತದೆ. ಇದು ವ್ಯಾವಹಾರಿಕ ಸತ್ಯಮಾತ್ರವಾಗಿರುತ್ತದೆ. ಪರಮಾರ್ಥ ಸತ್ಯವಲ್ಲ ಎಂದು ಗುರುಪ್ರಾಜ್ಞರು ತಿಳಿಯಹೇಳುತ್ತಾರೆ.

ಆದ್ದರಿಂದ ಮನುಷ್ಯನು ಅಂತರ್ಮುಖನಾಗಿ ಅಂತರ್ದೃಷ್ಟಿಯುಳ್ಳವನಾಗಿ ತನ್ನನ್ನು ಮರೆಯದೇ ನಿಜಾತ್ಮನನ್ನು ಸ್ಮರಣೆಯಲ್ಲಿಟ್ಟುಕೊಂಡು ಆತ್ಮನ ಸ್ವರೂಪವನ್ನೂ, ಸ್ವಭಾವವನ್ನೂ ವಿಚಾರ, ಯುಕ್ತಿ ವಿವೇಚನೆ, ವಿವೇಕ ಪೂರ್ವಕವಾಗಿ ತಿಳಿದುಕೊಂಡರೆ ಆಗ ಅವನಿಗೇ ತನ್ನ ನಿಜಸ್ವರೂಪದ ಅರಿವಾಗುವುದು. ಸತ್ಯ ಪರಮಾರ್ಥ ಜ್ಞಾನವಾಗುವುದು. ಅಂದರೆ ಆತ್ಮಜ್ಞಾನರೂಪದ ಬ್ರಹ್ಮಜ್ಞಾನವೇ ಆಗುವುದು. ಆತ್ಮನು

---

*ಪ್ರೇಕ್ಷಕ ಎಂಬ ಮಾತಿನಲ್ಲಿ ಕೇವಲ ಸಾಕ್ಷಿರೂಪ ಅಲ್ಲ, ರಾಗದ್ವೇಷಾದಿ ದೋಷವುಳ್ಳವನು ಎಂಬ ಅಭಿಪ್ರಾಯವಿದೆ (ದೇಹಾಭಿಮಾನಿಯಾಗಿರುತ್ತಾನೆ)

ಬ್ರಹ್ಮನೇ ಆಗಿರುತ್ತಾನೆ ಅದಾದಾಗ ಆವರೆಗೆ ಅವನಿಗೆ ದೂರ-ಪರೋಕ್ಷ ಎಂದಾಗಿದ್ದ ಕಾಲರೂಪ, ಮೃತ್ಯುರೂಪ ಎಂದಾಗಿದ್ದ ಈಶ್ವರನೇ ತನ್ನ ನಿಜ ಆತ್ಮನು, ಆತ್ಮನೇ ಈಶ್ವರನಾಗಿದ್ದವನು ಎಂದೂ ಅರಿವಾಗುವುದು. ಮತ್ತು ತನಗೆ ತಾನೇ ಅತ್ಯಂತ ಹತ್ತಿರವಾಗಿರುವುದರಿಂದ ಆ ತತ್ತ್ವಜ್ಞಾನಿಗೆ ಬ್ರಹ್ಮಾತ್ಮನು ಅಪರೋಕ್ಷವಾಗಿ ಸಿಕ್ಕುವನು. ಅಂದರೆ ನಾನು ಬ್ರಹ್ಮವೇ = ಪರಮಾತ್ಮನೇ ಎಂಬ ಅನುಭವಸಿದ್ದಿಯೇ ಆಗುವುದು. ಈ ಸಿದ್ಧಿಯೇ ಅಧ್ಯಾತ್ಮ ವಿದ್ಯಾಭ್ಯಾಸದಿಂದ ಸಿಕ್ಕುವ ಅಮೃತ ಫಲವು. ಇದೇ ಅಮೋಘ ಸ್ವಾತ್ಮ ಲಾಭವು. ಇದೇ ಪರಮಾರ್ಥ ಸತ್ಯ ಅನುಭವವು ಆಗಿರುತ್ತದೆ.

ಅಗ್ನಿರ್ದೇವೋ ದ್ವಿಜಾತೀನಾಂ ಸಾಧೂನಾಂ ಹೃದಿದೈವತಂ।
ಪ್ರತಿಮಾ ಸ್ವಲ್ಪಬುದ್ಧೀನಾಂ ಸರ್ವತ್ರ ವಿದಿತಾತ್ಮನಾಂ॥ ಪುರಾಣಾಭಿಯುಕ್ತೋಕ್ತಿಃ
ಗಂಗಾ ಗಾವೋಽಥ ಗಾಯತ್ರೀ ಗೀತಾ ಗೋವಿಂದ ನಾಮ ಚ।
ಗಕಾರ ಪಂಚಕಂ ಪುಣ್ಯಂ ತತ್ರಾಪಿ ಪ್ರಥಮೋ ಗುರುಃ॥
ಗುರುರ್ಬ್ರಹ್ಮಾಗುರುರ್ವಿಷ್ಣುಃ ಗುರುರ್ದೇವೋ ಮಹೇಶ್ವರಃ
ಗುರುಸ್ಸಾಕ್ಷಾತ್ ಪರಬ್ರಹ್ಮ ತಸ್ಮೈಶ್ರೀ ಗುರವೇ ನಮಃ॥



## ಚೇತನಾತ್ಮ ಪರಿಚಯ

ಚೇತನ, ಆತ್ಮಾ ಈ ಎರಡು ಮಾತುಗಳಿಗೂ ಒಂದೇ ಅರ್ಥ. ಒಂದೇ ವಸ್ತು ತತ್ವ ಎಂದು ತಿಳಿಯಬೇಕು. ಈ ವಸ್ತುವು ಚೈತನ್ಯಪೂರ್ಣವಾಗಿರುವುದರಿಂದ ಚೇತನ ಎಂದಾಗಿದೆ ಮತ್ತು ಪ್ರಕಾಶ ಘನವನ್ನು ದೀಪ ಎನ್ನುವಂತೆ ಚಿಚ್ಛಕ್ತಿ ಮತ್ತು ಜಡಶಕ್ತಿ ಸಮಸ್ತ ಶಕ್ತಿಗಳ ಘನವಾದ ಈ ಚೈತನ್ಯವನ್ನು ಚೇತನ ಎಂದು ಹೆಸರಿಸುತ್ತಾರೆ. ಚೈತನ್ಯ ಎಂದರೆ ಸರ್ವ ಶಕ್ತಿಗಳ ಮೂಲವಾದ ಚಿಚ್ಛಕ್ತಿಯಾಗಿದೆ. ಈ ಶಕ್ತಿಯೇ ಸಕಲ ಕ್ರಿಯಾಶಕ್ತಿಗಳಿಗೂ ಮತ್ತು ಮನುಷ್ಯಾದಿ ಪ್ರಾಣಿಗಳ ಜೀವನವೇ ಮೊದಲಾದ ಸಮಸ್ತ ಜ್ಞಾನ-ಕರ್ಮ ವ್ಯವಹಾರಗಳಿಗೂ ಮೂಲಚಾಲಕವಾಗಿರುತ್ತದೆ. ಈ ಚೈತನ್ಯವು ವಸ್ತುಗಳನ್ನು ಅರಿಯುವುದಾದ್ದರಿಂದ ಇದನ್ನು ಜ್ಞಾನ ಎನ್ನುತ್ತಾರೆ. ಇದೇ ಸಕಲ ಕಾರ್ಯಗಳಿಗೂ ಮೂಲಪ್ರಕೃತಿ ಹಾಗೂ ಮೂಲಕಾರಣವಾಗಿರುವುದರಿಂದ ಇದನ್ನು ಚಿಚ್ಛಕ್ತಿ ಎನ್ನಲಾಗುವುದು. ಈ ಚೈತನ್ಯವೇ ಸಮಸ್ತ ದೇಶ ಕಾಲ ಮತ್ತು ನಾಮರೂಪಗಳಲ್ಲಿ ವ್ಯಾಪಿಸಿಕೊಂಡಿರುವುದರಿಂದ ಇದು ಆತ್ಮಾ ಎನ್ನುವುದಾಗಿರುತ್ತದೆ.

ಹಾಗೂ ಜಡಪದಾರ್ಥಗಳನ್ನು ಬೆಳಗಿ ತೋರ್ಪಡಿಸುವುದಾದ್ದರಿಂದ ಇದು ಪ್ರಕಾಶರೂಪವಾಗಿರುತ್ತದೆ. ಆದರೆ ಈ ಪ್ರಕಾಶವು ಭೌತಿಕ ಬೆಳಕಿನಂತಲ್ಲ, ಸ್ವಯಂಪ್ರಕಾಶ - ದಿವ್ಯಜ್ಯೋತಿಯಾದ ಈ ಚೈತನ್ಯವು ಕತ್ತಲೆಯನ್ನು ಬೆಳಗುವುದಲ್ಲದೇ ಮನುಷ್ಯಾದಿ ಪ್ರಾಣಿಗಳ ಮನೋಬುದ್ಧಿಗಳಲ್ಲಿ ತನಗೆ ತಾನೇ ನಾನು ನಾನು ಎಂದು ತನ್ನ ಜ್ಞಾನರೂಪದಿಂದಲೇ ಪ್ರಕಾಶಿಸುವುದು. ಆತ್ಮಸ್ವರೂಪವೇ ಆದ ಈ ಜ್ಞಾನವು ಪ್ರತ್ಯಯ ರೂಪವಲ್ಲ = ಮನೋಬುದ್ಧಿವೃತ್ತಿಯಲ್ಲ. ಅದಕ್ಕೆ ಬೇರೆಯಾದುದು ಅನುಭವರೂಪವಾದುದಾಗಿರುತ್ತದೆ. ಅಂದಾಗ ಈ ಚೇತನಾತ್ಮನೇ ಪ್ರಾಣಿಗಳ = ಮಾನವರ ಜ್ಞಾನಪ್ರಕಾಶ ಸ್ವರೂಪದ ಪ್ರತ್ಯಗಾತ್ಮನೆಂದು ತಿಳಿಯಬೇಕು. ಇವನೇ ದೇವರು = ಪರಮಾತ್ಮನಾಗಿರುತ್ತಾನೆ ಎಂದರಿಯಬೇಕು.

ಶಬ್ದ ಆದಿ ವಿಷಯಗಳನ್ನು ಕಿವಿ ಮೊದಲಾದ ಇಂದ್ರಿಯಗಳಿಂದ ಗ್ರಹಿಸಿ ಅನುಭವಿಸುವುದು, ಬೆಳಕೂ ಸೇರಿದ ಇಡೀ ವಿಶ್ವವನ್ನು ಕಾಣುವುದು, ಕನಸನ್ನು ಮತ್ತು ಕತ್ತಲೆಯನ್ನು ನೋಡುವುದು, ಅಜ್ಞಾನವನ್ನು = ಅವಿದ್ಯೆಯನ್ನು ಅರಿಯುವುದು ಇವೆಲ್ಲವೂ ಭೌತಿಕ ಬೆಳಕಿನಿಂದ ಸಾಧ್ಯವಾಗುವುದಿಲ್ಲ, ಈ ಅನುಭವಗಳೆಲ್ಲವೂ ಅಂತರಾತ್ಮನ ಜ್ಯೋತಿಯಿಂದಲೇ ಶಕ್ಯವಾಗುವುದು. ದಿವ್ಯವಾದ ಈ ಅಂತರ್ಜ್ಯೋತಿಯೇ ಜ್ಞಾನಸ್ವರೂಪದ ಚೇತನಾತ್ಮನಾಗಿರುತ್ತಾನೆ. ಅಂದಾಗ ಮನುಷ್ಯರ ಪ್ರತ್ಯಗಾತ್ಮನು ಸ್ವಯಂಪ್ರಕಾಶ ಚೈತನ್ಯ ಜ್ಞಾನಸ್ವರೂಪನೇ = ಅಂದರೆ ನಿತ್ಯ ಶುದ್ಧ ಬುದ್ಧ ಮುಕ್ತ ಸ್ವಭಾವನೇ ಆಗಿರುತ್ತಾನೆಂದು ಅರಿತುಕೊಳ್ಳಬೇಕು. ಈ ಅರಿವು ಆಗದಿರುವಾಗ ಆ ಅಮೃತ ಚೈತನ್ಯವನ್ನೇ ಮನುಷ್ಯರು ತಮ್ಮ ಜೀವಾತ್ಮ ಮನುಷ್ಯ ಎಂದು ನಂಬಿಕೊಂಡಿರುವರು.

★★★

೧. ಜಗತ್ಸೃಷ್ಟಿಕರ್ತನಾದ ಈಶ್ವರನು ಶುದ್ಧ ಪರಮಾನಂದ ಬ್ರಹ್ಮನೇ ಎಂಬುದನ್ನು ಶ್ರುತಿ ಪ್ರಮಾಣದಿಂದಲೇ ತಿಳಿಯಬೇಕು.

೨. ಮನುಷ್ಯನ ಪ್ರತ್ಯಗಾತ್ಮನು ಕೇವಲ ಸಚ್ಚಿದಾನಂದ ಎಂಬುದನ್ನು ಯುಕ್ತಿ ವಿಚಾರ, ವಿವೇಕ, ಪ್ರಮಾಣದಿಂದಲೇ ಗೊತ್ತುಮಾಡಿಕೊಳ್ಳಬೇಕು.



೩. ಬ್ರಹ್ಮಪ್ರತ್ಯಗಾತ್ಮೈಕ್ಯವನ್ನು (ತಾನು ನಿತ್ಯ, ಶುದ್ಧ ಬುದ್ಧ ಮುಕ್ತ ಸ್ವಭಾವ = ಬ್ರಹ್ಮನೇ ಎಂಬುದನ್ನು) ಸ್ವಾನುಭವದಿಂದ ಕಂಡುಕೊಳ್ಳಬೇಕು.

ಶ್ರುತಿ ಮತ್ತು ಯುಕ್ತಿ ಇವೆರಡೂ ಪ್ರಾಯಃ ಪರಿಣಾಮವಾದ ಪ್ರಕ್ರಿಯೆಯನ್ನು ಗ್ರಹಿಸಿಕೊಂಡು ಪರಮಾರ್ಥದ ದಿಗ್ದರ್ಶನ ಮಾಡುತ್ತವೆ. ಬ್ರಹ್ಮದ ವಿವರ್ತವನ್ನು ಸ್ವಾನುಭವದಿಂದಲೇ ಅರಿತುಕೊಳ್ಳಬೇಕು. ಹೀಗೆ ಶ್ರುತಿ, ಯುಕ್ತಿ, ಅನುಭವ ಈ ಮೂರು ಪ್ರಮಾಣಗಳನ್ನು ಉಪಯೋಗಿಸಿಕೊಂಡು ಮನನ ನಿದಿಧ್ಯಾಸನಗಳಿಂದ ಪರಮಾರ್ಥ ನಿಶ್ಚಯದಲ್ಲಿ ನೆಲೆಗೊಂಡಾಗ ಬ್ರಹ್ಮಾತ್ಮನು ಸ್ವಯಂಪ್ರಕಾಶ, ಅಪರೋಕ್ಷ, ಅಪ್ರಮೇಯ, ನಿರತಿಶಯ ಮಹಾನ್‌ವಸ್ತು ಅನುಭವ ರೂಪ ಮತ್ತು ನಿತ್ಯ ಶುದ್ಧ, ಬುದ್ಧ, ಮುಕ್ತಸ್ವಭಾವ ಸ್ವಯಂಸಿದ್ಧ ಎಂಬ ಅರ್ಥಗಳೆಲ್ಲವೂ ಮನವರಿಕೆಯಾಗುವು**ವು**.



ಭಗವನ್‌ಮಾಯೆಯು ನಾಮ ರೂಪ ಪ್ರಪಂಚಕ್ಕೆ ಕಾರಣವಾಗಿರುತ್ತದೆ. ಮೂಲಾಜ್ಞಾನವು = ಆತ್ಮಸ್ವರೂಪಾಜ್ಞಾನವು ಮನುಷ್ಯರ ಸುಖ ದುಃಖ ವೇದನಾರೂಪ ವಿಶಿಷ್ಟಸಂಸಾರ ಬಂಧನಕ್ಕೆ ಮೂಲ ಕಾರಣವಾಗಿರುತ್ತದೆ. ಭ್ರಮರೂಪದ ಮಿಥ್ಯಾಜ್ಞಾನ = ಅವಿದ್ಯೆಯು ಮನುಷ್ಯಾದಿ ಪ್ರಾಣಿಗಳ (ಬಂಧ-ಮೋಕ್ಷ) ಸಕಲ ವ್ಯವಹಾರಕ್ಕೂ ಕಾರಣವಾಗಿರುವುದು.



ಅಖಂಡಮಂಡಲಾಕಾರಂ ವ್ಯಾಪ್ತಂ ಯೇನ ಚರಾಚರಮ್ ।
ತತ್ಪದಂ ದರ್ಶಿತಂ ಯೇನ ತಸ್ಮೈಶ್ರೀಗುರವೇ ನಮಃ ॥

## ತತ್ತ್ವಜ್ಞಾನವು ದುರ್ಲಭವಾದುದು

ಮನುಷ್ಯಾದಿ ಸಕಲ ಪ್ರಾಣಿಗಳ ಅನ್ತರಾತ್ಮನು ವಾಸ್ತವದಲ್ಲಿ ನಿತ್ಯ, ಶುದ್ಧ, ಬುದ್ಧ, ಮುಕ್ತ ಸ್ವಭಾವದ ಅದ್ವೈತ ಬ್ರಹ್ಮವೇ = ಪರಮಾತ್ಮನೇ ಆಗಿರುತ್ತಾನೆ. ಆದರೆ ಅವನು ಎಲ್ಲರಿಗೂ ಸುಲಭನಾಗಿರುವುದಿಲ್ಲ. ಉದ್ದೇಶಪಟ್ಟು ಪ್ರಯತ್ನ ಮಾಡದೆ ಅವನ ತಿಳಿವು ಆಗುವುದಿಲ್ಲ. ಏಕೆಂದರೆ ಶರೀರವು ಸತ್ಯ ಎಂದು ನಂಬಿಕೊಂಡಿರುವಾಗ ಮತ್ತು ಸಾಕ್ಷೀ ಆತ್ಮ ಚೇತನನಿಗೆ ಶರೀರವು (ವೇಷಕವಚದಂತೆ) ಉಪಾಧಿ ಎಂದು ತಿಳಿದುಕೊಳ್ಳದಿರುವಾಗ ಭೇದ ಬುದ್ಧಿಯೇ ಅಂದರೆ ಜೀವಾತ್ಮಾ ಪರಮಾತ್ಮಾ ಇವರು ಬೇರೆಬೇರೆ ಎಂಬ ತಿಳಿವಳಿಕೆಯೇ ಇರುವುದು ಸ್ವಭಾವ. ಏಕಾದ್ವಿತೀಯ ಅನ್ತರಾತ್ಮನು ಸ್ವಯಂಪ್ರಕಾಶ, ಸಾಕ್ಷಾದಪರೋಕ್ಷ, ಸ್ವಯಂಸಿದ್ಧ ಆಗಿರುತ್ತಿದ್ದರೂ ಅವನ ಅರಿವು =

ತಿಳಿವು ಆಗದೇ, ಅವನು ಸಿಕ್ಕದೇ ಇರುವುದಕ್ಕೆ ಕಾರಣಗಳೂ ಅಷ್ಟೇ ಬಲವತ್ತರವಾಗಿರುತ್ತವೆ. ತಕ್ಕ ಪ್ರಯತ್ನವಿಲ್ಲದೇ ಸ್ವಾಭಾವಿಕವಾಗಿ ಆಗುವ ಇಂದ್ರಿಯಜನ್ಯ ಜ್ಞಾನವು ಸ್ವಪ್ನದಂತೆ ಹುಸಿಯಾಗಿರುತ್ತದೆ. ಪರಮಾರ್ಥ ಸತ್ಯವಾಗಿರುವುದಿಲ್ಲ. ಅದ್ವೈತಬ್ರಹ್ಮವು ವಾಸ್ತವವಾಗಿರುವಂತೆ, ಅಂತಹ ಸತ್ಯ ವಸ್ತುವಿನ ಅರಿವಿಲ್ಲದಿರುವುದೂ ಸ್ವಾಭಾವಿಕವಾಗಿದೆ, ನೈಸರ್ಗಿಕವಾಗಿದೆ. ಸರ್ವಭೂತಾನಿ ಸಮ್ಮೋಹಂ ಸರ್ಗೇ ಯಾನ್ತಿ = ಗೀತಾಸು ೭ -೨೭ (ಮನುಷ್ಯಾದಿ ಸಕಲ ಪ್ರಾಣಿಗಳೂ ಜನ್ಮತಃ ಮೋಹವುಳ್ಳವಾಗಿರುತ್ತವೆ). ಆದ್ದರಿಂದ ಮನುಷ್ಯನು ತಾಪತ್ರಯ ಸಂಕುಲದ ಸಂಸಾರಬಂಧನದಿಂದ ಬಿಡುಗಡೆಯಾಗುವ ಸನ್ಮಾರ್ಗವನ್ನು ಹಿಡಿಯಲು, ಅದಕ್ಕೆ ಅತ್ಯಾವಶ್ಯಕವಾದ ಸಮ್ಯಗ್‌ಜ್ಞಾನ ಮಾಡಿಕೊಳ್ಳಲು, ಇರುವ ತೊಡಕುಗಳನ್ನು = ಪ್ರತಿಬಂಧಕಗಳನ್ನು ಸ್ವಯಂ - ತಾನೇ ವಿಚಾರ ವಿವೇಕದಿಂದಲೇ ನಿವಾರಿಸಿಕೊಳ್ಳಬೇಕು. ಬೇರೆ ಉಪಾಯವಿಲ್ಲ. ವಿಚಾರ ಏವ ಜ್ಞಾನ ಸಾಧನಂ

ಇಂತಹ ಪ್ರತಿಬಂಧಕಗಳು ಯಾವುವೆಂದರೆ : ೧. ಮೂಲಾಜ್ಞಾನ ಅಂದರೆ ಸ್ವಸ್ವರೂಪಾಜ್ಞಾನ. ೨. ಆತ್ಮವಿಸ್ಮೃತಿ ಎಂಬ ಮೌಢ್ಯ. ೩.. ಅವಿದ್ಯೆ = ಮಿಥ್ಯಾಜ್ಞಾನ. (ತಪ್ಪು ತಿಳಿವಳಿಕೆ) ೪. ಮಾಯೆ = ಬಾಹ್ಯ ನಾಮರೂಪಗಳ ಆಕರ್ಷಣೆಗೆ ಒಳಗಾಗಿರುವುದು. ೫. ಸಂಶಯ ಮತ್ತು ಲೋಕ ಮತ ವಾದಗಳು. ೬. ಪ್ರಮಾಣವು ದುರ್ಲಭವಾಗಿರುವುದು. ೭. ಸಾಧನಾಭಾವ. ೮. ದುರಿತ ಪ್ರಾಬಲ್ಯ. ಹೀಗೆ ಇಷ್ಟು ಮಾತ್ರವಲ್ಲದೇ ಇನ್ನೂ ಬೇರೆ ಪ್ರತಿಬಂಧಕಗಳಿರಬಹುದು. ಇಂತಹ ಪ್ರತಿಬಂಧಕಗಳು ಇರುವಾಗ ಸನ್ಮಾರ್ಗದಲ್ಲಿ ಪ್ರವೃತ್ತಿಯು ಉಂಟಾಗಲಾರದು. ಪ್ರಯತ್ನಪಟ್ಟರೂ ಫಲಿಸಲಾರದು. ಆದರೆ ಮನುಷ್ಯನು ತನ್ನ ಶ್ರೇಯಃ ಪ್ರಾಪ್ತಿಗೆ ಯತ್ನ ಮಾಡದಿದ್ದರೆ ಅದು ಅವನ ಆಲಸ್ಯ ಪ್ರಮಾದ ದೋಷವೇ ಸರಿ. ಆದ್ದರಿಂದ ಮನುಷ್ಯನು ಮೌಢ್ಯ ಆಲಸ್ಯ ಪ್ರಮಾದಾದಿಗಳನ್ನು ದೂರೀಕರಿಸಿ ಈ ಬಗ್ಗೆ ತಾನೇ ಮುತುವರ್ಜಿವಹಿಸಿ ಪ್ರಯತ್ನ ಮಾಡಬೇಕು. ಆತ್ಮಾ ಅನಾತ್ಮ ವಿವೇಚನೆ ಮಾಡಿಕೊಳ್ಳಬೇಕು. ಆಗಲೇ ಮನುಷ್ಯ ಜನ್ಮವು ಸಾರ್ಥಕವಾಗುವುದು. ಬಹುನಾ ಪುಣ್ಯಪಣ್ಯೇನ ಕ್ರೀತೇಯಂ ಕಾಯನೌಸ್ತ್ವಯಾ । ಪಾರಂ ದುಃಖೋದಧೇರ್ಗನ್ತುಂ ತರ ಯಾವನ್ನಭಿದ್ಯತೇ॥ ಅಯ್ಯಾ ಮಾನವ, ನೀನು ತುಂಬಾ ಪುಣ್ಯ ಬೆಲೆ ತೆತ್ತು ಈ ದೇಹವೆಂಬ ಹಡಗನ್ನು ಪಡೆದಿರುತ್ತೀಯೆ. ಏತಕ್ಕೆಂದರೆ ಈ ಸಂಸಾರವೆಂಬ ದುಃಖಸಾಗರವನ್ನು

ದಾಟುವುದಕ್ಕಾಗಿ. ಆದ್ದರಿಂದ ಈ ದೇಹ ಹಡಗು ಭಂಗವಾಗುವುದರೊಳಗಾಗಿ ಸಂಸಾರ ಸಾಗರವನ್ನು ದಾಟಿಬಿಡು ॥ ಚರನ್ ವೈ ಮಧು ವಿಂದತೇ ಪ್ರಯತ್ನಶೀಲನಾದವನು ಮಧುರ ಫಲವನ್ನು ಪಡೆದೇ ಪಡೆಯುವನು ॥ ತತ್‌ಕರ್ಮ ಯನ್ನ ಬಂಧಾಯ ಸಾ ವಿದ್ಯಾ ಯಾ ವಿಮುಕ್ತಯೇ. ಯಾವ ಕರ್ಮವು ಸಂಸಾರ ಬಂಧನಕ್ಕೆ ಕಾರಣವಾಗುವುದಿಲ್ಲವೋ ಅದೇ ಶ್ರೇಷ್ಠವಾದ ಕರ್ಮವಾಗಿರುತ್ತದೆ ಮತ್ತು ಯಾವುದು ಮೋಕ್ಷಕ್ಕೆ ಕಾರಣವಾಗುವುದೋ ಅದೇ ನಿಜವಾದ ವಿದ್ಯೆಯಾಗಿರುತ್ತದೆ॥ ಅನೇಕ ಜನ್ಮಸಂಸಿದ್ಧಃ ತತೋಯಾತಿ ಪರಾಂಗತಿಂ ಅನೇಕ ಜನ್ಮಗಳ ಸಾಧನೆಯಿಂದ ಪರಮ ಸದ್ಗತಿಯನ್ನು ಹೊಂದುವನು ॥ ಮೃತ್ಯೋರ್ಬಿಭೇಷಿ ಕಿಂ ಮೂಢ ಭೀತಂ ಮುಂಚತಿ ಕಿಂ ಯಮಃ। ಅಜಾತಂ ನೈವ ಗೃಹ್ಣಾತಿ ಕುರು ಯತ್ನಮಜನ್ಮನಿ॥ ಅಯ್ಯಾ ಮಂದಮತಿ ಮನುಷ್ಯ, ಮರಣ-ಮೃತ್ಯು ಎಂದು ಏತಕ್ಕೆ ಹೆದರಿಕೊಳ್ಳುವೆ, ಯಮನು ಹೆದರಿಕೊಂಡವನನ್ನು ಬಿಟ್ಟುಬಿಡುವನೆ ! ಆದರೆ ಹುಟ್ಟದೇ ಇರುವವನನ್ನು ಅವನು ಹಿಡಿದುಕೊಳ್ಳುವುದಿಲ್ಲ. ನೀನು ಹುಟ್ಟದಿರುವುದಕ್ಕೆ ತಕ್ಕ ಉಪಾಯ = ಯತ್ನ ಮಾಡು.

ದುರಿತವಿಶೇಷ, ಪಾಪಪ್ರಾಬಲ್ಯ ಇರುವಾಗ ಆಸುರೀಸಂಪತ್ತಿನ ಅಧಿಕಾರವೇ ನಡೆಯುತ್ತಿರುವುದು. ದೈವೀಸಂಪತ್ತು ಸ್ಥಗಿತವಾಗುವುದು. ಆದ್ದರಿಂದ ತತ್ತ್ವಜಿಜ್ಞಾಸುವು ಮೊಟ್ಟಮೊದಲನೆಯದಾಗಿ ದುಸ್ಸಂಗವನ್ನೂ ಪಾಪ ಪ್ರವೃತ್ತಿಗಳನ್ನೂ ದೂರಮಾಡಿಕೊಳ್ಳಬೇಕು. ಆಗ ಸನ್ಮಾರ್ಗದಲ್ಲಿ ಪ್ರವೃತ್ತಿ ಉಂಟಾಗಿ ಶ್ರೇಯಸ್ಸಾಧನೆಯ ಉದಯವಾಗುವುದು. ಈ ಸಾಧನಾಭ್ಯಾಸವು ಬೆಳೆಯುತ್ತಿದ್ದರೆ ಪ್ರಮಾಣ ಲಾಭವಾಗುವುದು. ಅಂದರೆ ಶಾಸ್ತ್ರ - ಆಚಾರ್ಯರ ಉಪದೇಶ ಸುಯೋಗ ದೊರೆಯುವುದು. ಹೀಗೆ ಮೇಲಿಂದ ಮೇಲೆ ಉಪದೇಶ ಲಾಭವಾಗುತ್ತಿದ್ದರೆ ಆತ್ಮದೇವನ ಬಗ್ಗೆ ಸಂಶಯಗಳು ತೊಲಗುವುವು. ಲೋಕದ ವಾದಿ ಪ್ರತಿವಾದಿಗಳ ವಾದಜಾಲಗಳೂ ಅಡಗುವುವು. ಆಗ ಶಮದಮಾದಿ ಸಾಧನಗಳು ಬೆಳೆದಂತೆಲ್ಲಾ ಪ್ರಾಪಂಚಿಕ ವಸ್ತು ವ್ಯವಹಾರಗಳಲ್ಲಿ ಆಸಕ್ತಿ ಮೋಹವು ಕ್ಷೀಣಿಸುವುದು ಹಾಗೂ ಮಾಯಾಪ್ರಭಾವವೂ ತಗ್ಗುವುದು. ಹೀಗೆ ಕ್ರಮವಾಗಿ ಶಾಸ್ತ್ರೋಪದೇಶ ಶ್ರವಣ ಮನನ ಅಭ್ಯಾಸವು ನಡೆದಾಗ ಮಿಥ್ಯಾಜ್ಞಾನವೆಂಬ ಭ್ರಾಂತಿಯು ತಪ್ಪುವುದು. ವಿಚಾರ = ವಿವೇಕ = ಯೋಗದಿಂದ ಮಿಥ್ಯಾಜ್ಞಾನಕ್ಕೆ ಬಾಧೆಯಾದಾಗ ಸ್ವಾತ್ಮಸ್ಮೃತಿ (ಇದೇ

ಭಗವದ್ಭಕ್ತಿ) ಸುಯೋಗವುಂಟಾಗುವುದು. ಭ್ರಾಂತಿಯ ದುಃಸ್ಥಿತಿ ಮತ್ತು ಆತ್ಮವಿಸ್ಮೃತಿ ಎಂಬ ದುರ್ಯೋಗವು ಹೋಗಿ ಆತ್ಮಸ್ಮೃತಿಯು = ಭಕ್ತಿಯು ಬೆಳೆದಾಗ ಸಮ್ಯಗ್ ಜ್ಞಾನ ಉಂಟಾಗಲು ಸದವಕಾಶವಾಗುವುದು. ಹೀಗೆ ವಿಚಾರ ಕ್ರಮದಿಂದಲೇ ಮನುಷ್ಯನಿಗೆ ಸ್ವಪ್ರಯತ್ನದಿಂದಲೇ ಮತ್ತು ಸಾಧನಾಭ್ಯಾಸದಿಂದಲೇ ತತ್ತ್ವಜ್ಞಾನ = ಸಮ್ಯಗ್ ಜ್ಞಾನ ಅಂದರೆ ಆತ್ಮಜ್ಞಾನ- ಬ್ರಹ್ಮಜ್ಞಾನ ಆಗಬೇಕೇ ಹೊರತು ಬೇರೆ ಮಾರ್ಗವಿಲ್ಲ. ಸ್ವಪ್ರಬೋಧಂ ವಿನಾ ನೈವ ಸ್ವಸ್ವಪ್ನೋ ಹೀಯತೇಯಥಾ । ತಾನು ಎಚ್ಚರ ಮಾಡಿಕೊಳ್ಳದೇ ತನ್ನ ದುಃಸ್ವಪ್ನವು ಹೋಗಲಾರದು. ಮುಕ್ತಿಸ್ತು ಬ್ರಹ್ಮತತ್ತ್ವಸ್ಯ ಜ್ಞಾನಾದೇವ ನಚಾನ್ಯಥಾ। ಬ್ರಹ್ಮಜ್ಞಾನದಿಂದಲೇ ಮೋಕ್ಷವಾಗುವುದು. ಅನ್ಯಥಾ ಆಗಲಾರದು. ಬೇರೆ ಉಪಾಯ ಇಲ್ಲ. ಎಂತಹ ಪುಣ್ಯಕಾರ್ಯ = ಸತ್ಕರ್ಮಗಳಿಂದಲೂ ಮನುಷ್ಯನಿಗೆ ಸ್ವಾತ್ಮನ ಅರಿವು ಉಂಟಾಗಲಾರದು. ಆತ್ಮಜ್ಞಾನ ಆಗದೇ ಸಂಸಾರಬಂಧ ಮೋಕ್ಷವು ಇಲ್ಲ.

ಮೇಲೆ ತಿಳಿಸಿರುವಂತೆ ಸ್ವಾತ್ಮಜ್ಞಾನವುಂಟಾಗಲು ಅನೇಕ ಪ್ರತಿಬಂಧಕಗಳಿರುವುವು. ಅವು ಮನುಷ್ಯನಿಗೆ ತನ್ನ ನಿಜಾತ್ಮನೇ ತಿಳಿಯದಂತೆ = ಅರಿವಾಗದಂತೆ, ದೊರೆಯದಿರುವಂತೆ ಮರೆಮಾಡಿ ಮುಚ್ಚಿರುತ್ತವೆ. ಇಂತಿರುವ ಪ್ರತಿಬಂಧಕಗಳನ್ನೇ ಆತ್ಮನಿಗೆ ಆವರಣ = ಮರೆ ಎನ್ನುವರು. ಆದ್ದರಿಂದಲೇ ಅನಾದಿಕಾಲದಿಂದಲೂ ಆತ್ಮದೇವನು ಸಂಸಾರೀಜನರಿಗೆ ತಿಳಿಯದೇ ರಹಸ್ಯವಾಗಿರುವನು, ದೂರವಾಗಿರುವನು, ಪರೋಕ್ಷವಸ್ತುವಂತಾಗಿರುವನು, ಸಿಕ್ಕದೇ ಇರುವನು. ಆತ್ಮ ವಿಚಾರ ಹೀನತೆಯೇ ಸಂಸಾರ ಬಂಧನವಾಗಿರುವುದು.

ಈಗ ಈ ಪ್ರತಿಬಂಧಕಗಳ ಸ್ಥಿತಿ ಗತಿಯನ್ನು ವಿಚಾರ ಮಾಡೋಣ -

ಮೊದಲನೆಯದಾಗಿ ಮನುಷ್ಯನಿಗೆ ತನ್ನ ನಿಜಸ್ವರೂಪದ ಅರಿವಿಲ್ಲದಿರುವುದೇ ಮೂಲಾಜ್ಞಾನವಾಗಿದೆ. ಇದೇ ವಿಶಿಷ್ಟ ಸಂಸಾರ ಬಂಧನಕ್ಕೂ ಮೂಲ ಕಾರಣವಾಗಿರುವುದು. ಲೋಕ ವ್ಯವಹಾರದಲ್ಲೇ ತತ್ಪರನಾದ ಮನುಷ್ಯನು ಸ್ವಸ್ವರೂಪಜ್ಞಾನವಿಲ್ಲದವನೇ ಆಗಿರುತ್ತಾನೆ. ಇದೇ ಅವಿದ್ಯೆ, ಅಜ್ಞಾನವು. ಅಜ್ಞಾನ ಎಂದರೆ ಜ್ಞಾನದ ಅಭಾವವಲ್ಲ. ಏಕೆಂದರೆ ಆತ್ಮನು ಜ್ಞಾನಸ್ವ ರೂಪನೇ ಆಗಿರುವುದರಿಂದ ಅವನಲ್ಲಿ ಜ್ಞಾನದ ಅಭಾವ ಸಂಭವಿಸುವಂತೆಯೇ ಇಲ್ಲ. ನಿನ್ನ ನಿಜ

ಸ್ವರೂಪವೇನು ಎಂದು ಮನುಷ್ಯನನ್ನು ಕೇಳಿದರೆ ಆಗ ಪ್ರಾಕೃತ ಮನುಷ್ಯನು ನಾನು ನನ್ನ ನಿಜದ ಸ್ವರೂಪವನ್ನು ಅರಿಯೆನು ಎಂದು ತಿಳಿದುಕೊಂಡೇ ಹೇಳುತ್ತಾನಲ್ಲವೇ? ತಿಳಿದಿದ್ದನ್ನು ತಾನೇ ಹೇಳಬಹುದು. ಅಂದಾಗ ಸ್ವರೂಪಾಜ್ಞಾನಕ್ಕೆ ಮನುಷ್ಯನು ತಾನೇ = ಸಾಕ್ಷೀ ಎಂದಾಯಿತು. ಆದ್ದರಿಂದ ಅವನಲ್ಲಿ ಆಗಲೂ ಜ್ಞಾನವಿದ್ದೇ ಇರುವುದೆಂದು ಗೊತ್ತಾಗುವುದು. ಆದರೆ ಇದು ಸ್ವಪ್ನದಂತೆ ಸಾಮಾನ್ಯ ಜ್ಞಾನವಾಗಿರುತ್ತದೆ. ಸಮ್ಯಗ್ ಜ್ಞಾನ ರೂಪವಲ್ಲ. ಮನುಷ್ಯನಿಗೆ ತನ್ನ ನಿಜರೂಪವನ್ನು ಅರಿತಿಲ್ಲ ಎಂದಾಗಲೀ, ಮನುಷ್ಯ ಎಂದು ತಿಳಿದಿದ್ದು ತಪ್ಪು ಎಂದಾಗಲೀ ಗೊತ್ತಿರುವುದಿಲ್ಲ. ಇವೆಲ್ಲವೂ ಅಜ್ಞಾನವೇ. ಅಂತೆಯೇ ಬಲ್ಲವರು ಅಜ್ಞಾನ = ಅವಿದ್ಯೆ ಅಂದರೆ ವಿದ್ಯಾ ವಿರೋಧಿ ಎಂದೂ, ನ ವಿದ್ಯತೇ ಇತಿ ಅವಿದ್ಯಾ ಎಂದೂ ತಿಳಿಸಿಕೊಡುತ್ತಿದ್ದಾರೆ. ಇದು ಬೆಳಕಿಗೆ ಕತ್ತಲೆ ವಿರೋಧಿ ಎಂಬಂತೆ ಎಂದು ತಿಳಿಯಬೇಕು. ಬೆಳಕು ಮತ್ತು ಕತ್ತಲೆ ಇವು ಪರಸ್ಪರ ವಿರೋಧಿಗಳಷ್ಟೆ! ಬೆಳಕು ಇಲ್ಲದಾಗ ಕತ್ತಲೆ ಇರುವುದು. ಹಾಗೆಯೇ ಆತ್ಮಜ್ಞಾನ ಮಾಡಿಕೊಳ್ಳದಿರುವಾಗ ಆತ್ಮಾಜ್ಞಾನವಿರುವುದು. (ಕತ್ತಲೆ ಎಂಬುದು ಒಂದು ಸ್ವತಂತ್ರ ವಸ್ತುವಲ್ಲ) ಪ್ರಕಾಶದ ಪ್ರಾಗಭಾವ ತಮಸ್ಸು. ಹಾಗೆಯೇ ವಿಚಾರ ಪ್ರಾಗಭಾವವೇ ಅಜ್ಞಾನ = ಅವಿದ್ಯೆ ಎಂದು ಚಿಂತಿಸಬೇಕು. ಇದೇ ಮೌಢ್ಯ ಎನ್ನುವುದಾಗಿರುತ್ತದೆ. ಈ ಸ್ವಸ್ವರೂಪಾಜ್ಞಾನವು ಮನುಷ್ಯರಲ್ಲಿ ಸಹಜವಾಗಿರುವುದು. ಅಂದರೆ ನೈಸರ್ಗಿಕವಾದುದು. ಅನಾದಿಯಾದುದು. (ಆದಿಯು ತಿಳಿಯುವುದಿಲ್ಲ ಎಂದಿಷ್ಟೇ ಅರ್ಥ) ಇದು ಹೊಸದಾಗಿ ಹುಟ್ಟಿದುದು ಅಲ್ಲ. ಇದಕ್ಕೆ ಕಾರಣವೆಂಬುದಿಲ್ಲ. ಪ್ರಮಾಣವೆಂಬುದೂ ಇಲ್ಲ. ನಾನು ನಿಜಾತ್ಮನನ್ನು ಅರಿಯೆ ಎಂಬ ಅನುಭವದಿಂದಲೇ ಅದು ಇದೆ ಎನ್ನಬೇಕು. ಇದು ಪ್ರಾಕೃತ ಮನುಷ್ಯರಲ್ಲಿ ಅಪರೋಕ್ಷವಾಗಿಯೇ ಇರುವುದು. ಆದ್ದರಿಂದ ದೇವರು ಆತ್ಮನು ಇದ್ದಾನೆ ಎಂಬ ಕೇವಲ ನಂಬಿಕೆಯಿಂದ ಈ ಅಜ್ಞಾನವು ಹೋಗುವುದಿಲ್ಲ. ಆತ್ಮನ ಅಪರೋಕ್ಷ ಜ್ಞಾನದಿಂದಲೇ ಅಜ್ಞಾನವು ತೊಲಗುವುದು. ಇದರ ಪ್ರಕಾರ ವಿಶೇಷಗಳೇ ಆತ್ಮ ವಿಸ್ಮೃತಿ ಮತ್ತು ಮಿಥ್ಯಾಜ್ಞಾನ ಎಂಬ ಅವಿದ್ಯೆಗಳು. ಇವು ಮೂರೂ ತಮೋರೂಪಗಳಾಗಿರುತ್ತವೆ. ಕತ್ತಲೆಯು ವಸ್ತುವನ್ನು ಆವರಿಸಿ ಮುಚ್ಚಿ ವಸ್ತು ತೋರದಿರುವಂತೆ ಮಾಡುವುದಷ್ಟೆ! ಹಾಗೆಯೇ ತನ್ನಲ್ಲಿರುವ ಈ ತಮೋರೂಪದ ಸ್ವಸ್ವರೂಪಾಜ್ಞಾನವು ಮನುಷ್ಯನಿಗೆ ತನ್ನ ಆತ್ಮವಸ್ತು

ಇದನ್ನೇ ಜ್ಞಾನಾವರಣ ಎಂದು ತಿಳಿಸುತ್ತಾರೆ



ತಿಳಿಯದಂತೆ ಮಾಡಿರುವುದು. ಈ ಅಜ್ಞಾನವು ಆತ್ಮ ವಸ್ತುವನ್ನು ಮುಸುಕಿ ಮುಚ್ಚಿರುವುದರಿಂದ ಇದನ್ನು ಆವರಣಶಕ್ತಿ ಎಂದು ಕರೆದಿದ್ದಾರೆ. (ಶಕ್ತಿ ಎಂದು ಕರೆಯಲು ಕಾರಣವೇನೆಂದರೆ ಏನಾದರೊಂದು ಕಾರ್ಯವನ್ನು ಉಂಟುಮಾಡುವುದೇ ಶಕ್ತಿಯ ಸ್ವಭಾವ) ಶಕ್ತಿ ಎಂಬುದು ಭಾವರೂಪವಾಗಿರುವಂತೆ ಈ ಮೂಲಾಜ್ಞಾನವು ಭಾವರೂಪವೆಂದು (ಕಾರಣಾಜ್ಞಾನ = ಕಾರಣಶರೀರ) ಎಂದು ಬಗೆಯಬಹುದಾಗಿದೆ. ಇದು ತತ್ತ್ವಜ್ಞಾನದಿಂದ ನಾಶಹೊಂದುವು ದಾದ್ದರಿಂದಲೂ, ಧ್ವಂಸಕ್ಕೆ ಪ್ರತಿಯೋಗಿ ಅಪೇಕ್ಷೆಯಿರುವುದರಿಂದಲೂ ಈ ಮೂಲಾಜ್ಞಾನವನ್ನು ಭಾವರೂಪವೆಂದು ಎಣಿಸಬಹುದು. ಈ ಮೂಲಾಜ್ಞಾನಕ್ಕೆ ಬ್ರಹ್ಮವಸ್ತುವೇ ವಿಷಯ. ಅಜ್ಞಾನೀ ಮನುಷ್ಯನೇ ಆಶ್ರಯ ಎಂದು ಗೊತ್ತುಮಾಡಿಕೊಳ್ಳಬೇಕು. ಪ್ರಮಾತೃ ಮನುಷ್ಯನೇ ಆತ್ಮಚೇತನನಷ್ಟೆ! ಕತ್ತಲೆಯು ಆಶ್ರಯವನ್ನು ಆವರಿಸಿಕೊಂಡಿರುವಂತೆ ಮೂಲಾಜ್ಞಾನವು ಪ್ರಮಾತೃ ಮನುಷ್ಯನನ್ನು ಆವರಿಸಿರುವುದು ಎಂದು ಚಿಂತಿಸಬೇಕು. ಮುಖ್ಯವಾಗಿ ಆತ್ಮವಿಚಾರ ಹೀನತೆಯೇ ಆತ್ಮನಿಗೆ ಆವಣವಾಗಿರುವುದು.

ಈ ಮೂಲಾಜ್ಞಾನದ ಜೊತೆ ಜೊತೆಯಲ್ಲಿಯೇ ಆತ್ಮವಿಸ್ಮೃತಿ ಎಂಬ ಮೌಢ್ಯ ಇರುವುದೆಂಬುದನ್ನು ಗುರುತಿಸಿಕೊಳ್ಳಬೇಕು. ಮನುಷ್ಯನು ಸಾಮಾನ್ಯವಾಗಿ ತನ್ನ ಆತ್ಮನನ್ನೇ ಮರೆತು ಬಾಹ್ಯ ವಸ್ತು ವ್ಯವಹಾರದಲ್ಲೇ ತೊಡಗಿಕೊಂಡಿರುವುದು ಸ್ವಾಭಾವಿಕವಾಗಿದೆ. ಹಿಂದೆ ಎಂದೂ ಅವನು ತನ್ನ ನಿಜಸ್ವರೂಪವನ್ನು ಕಂಡುಕೊಂಡಿರುವುದಿಲ್ಲವಾದ್ದರಿಂದ ಅಂತಹ ಆತ್ಮನನ್ನು ಸ್ಮರಿಸಿಕೊಳ್ಳಲೂ ಶಕ್ಯವಾಗುವುದೇ ಇಲ್ಲ. ಇದೇ ಆತ್ಮವಿಸ್ಮೃತಿಯು ಸಹಜವಾಗಿದ್ದುಬಿಟ್ಟಿದೆ. ಹೀಗೆ ತನ್ನನ್ನೇ ಮರೆತುಕೊಂಡಿರುವ ಮನುಷ್ಯನಿಗೆ ತನಗೆ ತಾನೇ ಮರೆಯಲ್ಲಿದ್ದಂತಾಗಿರುತ್ತಾನೆ. (ಕಂಠದಲ್ಲಿ ಧರಿಸಿರುವ ರತ್ನವನ್ನು ಮರೆತಿರುವಂತೆ) ಈ ಮರೆಯೇ ಮಾಯೆ ಎಂಬ ಭಾವವಾಗಿರುವುದು. ಪ್ರಮೇಯವಾಗಿರುವುದು. ಇದನ್ನೇ ಆತ್ಮಮಾಯೆ ಅಥವಾ ದೈವೀಮಾಯೆ ಎಂದು ಕರೆದಿರುವರು. ಸ್ವಸ್ವರೂಪಜ್ಞಾನವಿಲ್ಲದ್ದೆಂಬ ಮೂಲಾಜ್ಞಾನವು (ಇದೇ ಜೀವಾತ್ಮನ ಪ್ರಕೃತಿ = ಸ್ವಭಾವವಾಗಿರುತ್ತದೆ) ಸಮ್ಯಗ್ ಜ್ಞಾನಕ್ಕೆ ಪ್ರತಿಬಂಧಕವಾಗಿರುವಂತೆ ಈ ಆತ್ಮವಿಸ್ಮೃತಿ ಎಂಬ ಮೌಢ್ಯವು ಪ್ರತಿಬಂಧಕವಾಗಿರುತ್ತದೆ. ಒಂದು ಮೂಲಕಾರಣ, ಮತ್ತೊಂದು ಮುಖ್ಯ

ಕಾರಣವಾಗಿರುತ್ತದೆ.

ಹೀಗೆ ಮೂಲಾಜ್ಞಾನವೆಂಬ ಆವರಣ ಶಕ್ತಿಯಿಂದ ನಿಜಾತ್ಮಸ್ವರೂಪವು ಮುಚ್ಚಿರಲು ಮತ್ತೆ ಆತ್ಮವಿಸ್ಮೃತಿ ಎಂಬ ಮೌಢ್ಯ = ಮಾಯೆಯಿಂದ ಆತ್ಮನು ಮರೆಯಾಗಿರಲು ಆ ಮಾಯಾ ಪ್ರಭಾವದಿಂದಲೇ ಮನುಷ್ಯನಿಗೆ ವಿಕ್ಷೇಪಶಕ್ತಿರೂಪವಾದ ಆತ್ಮಾನಾತ್ಮರ ಅನ್ಯೋನ್ಯಾಧ್ಯಾಸವು ಮತ್ತು ನಾನು ಮನುಷ್ಯ ಎಂಬ ಮಿಥ್ಯಾಜ್ಞಾನವು ಉಂಟಾಗುವುದು. ಅಂದರೆ ಮನುಷ್ಯರಿಗೆ ಆತ್ಮವಿಷಯದಲ್ಲಿ ವಿಪರ್ಯಯಜ್ಞಾನ- ವಿಪರೀತ ಜ್ಞಾನವಾಗುವುದು. ನಾನು, ಮನುಷ್ಯ, ದೇಹೀ, ಗಂಡಸು, ಹೆಂಗಸು ಎಂಬೀರೀತಿಯ ಅನ್ಯಥಾಜ್ಞಾನ = ಭ್ರಾಂತಿ ಆಗುವುದು. ನಾನು ನಿತ್ಯ ಸಾಕ್ಷಿ ಚೈತನ್ಯ = ಆತ್ಮಾ ಎಂಬ ಅರಿವಿಗೆ ಬದಲಾಗಿ ಆತ್ಮಾನಾತ್ಮರ ಅನ್ಯೋನ್ಯಾಧ್ಯಾಸರೂಪದ ನಾನು ಮನುಷ್ಯ ದೇಹೀ ಎಂಬ ಮಿಥ್ಯಾಜ್ಞಾನವುಂಟಾಗುವುದು. ಈ ಅಧ್ಯಾಸದಿಂದುಂಟಾಗುವ ಮಿಥ್ಯಾಜ್ಞಾನವೆಂಬ ಅವಿದ್ಯೆಯು = ತಪ್ಪು ತಿಳಿವಳಿಕೆಯು ಸಮ್ಯಗ್ ಜ್ಞಾನಕ್ಕೆ ಪ್ರಧಾನ ಪ್ರತಿಬಂಧಕವಾಗಿರುತ್ತದೆ. ಇದೇ ಸಂಸಾರಬಂಧನಕ್ಕೆ ಪ್ರಧಾನ ಕಾರಣವಾಗಿರುತ್ತದೆ. ಏಕೆಂದರೆ ಮನುಷ್ಯನು ನಾನು ಎಂದು ಭಾವಿಸುವಾಗ ಕೇವಲ ಶುದ್ಧ ಆತ್ಮಚೇತನನನ್ನು ಅರಿಯುತ್ತಿರುವುದಿಲ್ಲ. ಅಶುದ್ಧವಾದ ದೇಹೇಂದ್ರಿಯ ಸಂಘಾತವನ್ನೂ ತನ್ನನ್ನೂ (ಆತ್ಮನನ್ನೂ) ಸೇರಿಸಿಕೊಂಡು ಅವೆರಡನ್ನೂ ಅಭೇದವಾಗಿ ಬಗೆದುಕೊಂಡಿರುತ್ತಾನೆ. ಈ ಬಗೆಯ ನಾನು ಎಂಬ ಅಭಿಮಾನವೇ ಅವಿದ್ಯೆಯು = ಮಿಥ್ಯಾಜ್ಞಾನವಾಗಿರುತ್ತದೆ. ಇದೇ ಅಹಂಕಾರವು. (ಚೈತನ್ಯರೂಪದ ತಾನು ಸತ್ಯ. ಅಹಂಕಾರ ರೂಪದ ನಾನು ಅನೃತ = ಮಿಥ್ಯ) ಈ ರೀತಿ ಸತ್ಯಾನೃತರೂಪದ ನಾನು ಮನುಷ್ಯ ದೇಹೀ ಎಂಬ ಜ್ಞಾನವು ಪ್ರಮಾಣದಿಂದೇನೂ ಹುಟ್ಟುವುದಲ್ಲ. ಸ್ವಾಭಾವಿಕ ಅಂದರೆ ನೈಸರ್ಗಿಕ ಜ್ಞಾನ, ಕನಸಿನಲ್ಲಾಗುವಂತೆ ಭ್ರಮೆಯಾಗಿರುತ್ತದೆ. ಅಂತೆಯೇ ಇದು ಪ್ರಾಮಾಣಿಕವಾದುದಲ್ಲ. ಸತ್ಯವಾದ ಸಮ್ಯಗ್ ಜ್ಞಾನವಲ್ಲ. ಹೀಗೆ ಈ ಮೂರು ಪ್ರಕಾರದ ಅವಿದ್ಯೆಗಳೂ ಸಂಸಾರಕ್ಕೆ ಕಾರಣವಾಗಿದ್ದು ಸಮ್ಯಗ್ ಜ್ಞಾನಕ್ಕೆ ಪ್ರತಿಬಂಧಕಗಳಾಗಿರುತ್ತವೆ. ವಿದ್ಯಾವಿರೋಧಿಗಳು ಅಂದರೆ ಪ್ರಕಾಶರೂಪದ ವಿದ್ಯೆಗೆ ವಿರೋಧಿಯಾದ ತಮೋರೂಪಗಳಾಗಿರುತ್ತವೆ ಎಂದರಿಯಬೇಕು.

ಈ ಮೂಲಾಜ್ಞಾನ, ಆತ್ಮವಿಸ್ಮೃತಿ ಮತ್ತು ಮಿಥ್ಯಾಜ್ಞಾನ, ಎಂಬಿವು

ಮನುಷ್ಯನಲ್ಲಿ (ಆತ್ಮನಲ್ಲಿ) ಆವರಣಕಾರ್ಯವನ್ನೂ ಮತ್ತು ವಿಕ್ಷೇಪಕಾರ್ಯವನ್ನೂ ಉಂಟುಮಾಡುತ್ತವೆ. ಈ ಮೂರೂ ಪರಸ್ಪರ ಮಿಳಿತವಾಗಿಯೂ ಅನ್ಯೋನ್ಯಾಶ್ರಿತಗಳೂ ಆಗಿರುತ್ತವೆ. ಹಾಗೆ ಹೇಳುವುದು ನ್ಯಾಯವಿರುದ್ಧ ಎಂದು ಬಗೆಯವಂತಿಲ್ಲ, ಏಕೆಂದರೆ ಅನುಭವಾನುಸಾರವಾಗಿ ತತ್ತ್ವವನ್ನು ಕಂಡುಕೊಳ್ಳಬೇಕು. ಅನುಭವ ಮತ್ತು ಆತ್ಮಮಾಯೆ ಇವುಗಳ ಸ್ವಭಾವ ಪರಾಮರ್ಶಪೂರ್ವಕವಾಗಿ ನಿರ್ಣಯಮಾಡಿಕೊಳ್ಳಬೇಕು. ವಾಸ್ತವವಾಗಿ ಅವಿದ್ಯೆಗೂ ಮತ್ತು ಮಾಯೆಗೂ ಕಾರಣವೆಂಬುದೇನೂ ಇರುವುದಿಲ್ಲ. ಅವೆರಡೂ ಅನಾದಿ, ಅನಿರ್ವಚನೀಯ (ಎಂದರೆ ಸದಸದ್ವಿಲಕ್ಷಣ ಎಂದರ್ಥ. ಸದ್ವಸ್ತು ಎಂದಾಗಲೀ ಅಸದ್ವಸ್ತು ಎಂದಾಗಲೀ ನಿಶ್ಚಯಿಸಲಾಗದದು) ಪ್ರಮೇಯಗಳಾಗಿರುತ್ತವೆ. ಇದನ್ನೇ ಸ್ವಭಾವ = ಮೌಢ್ಯ ಎನ್ನಬಹುದು. ತತ್ತ್ವಜ್ಞಾನ ಪ್ರಕಾಶದಿಂದ ತಮೋರೂಪದ ಅವು ಮೂರೂ ಬೆಳಕಾದಾಗ ಕತ್ತಲೆಯು ತೊಲಗುವಂತೆ ಇಲ್ಲವಾಗುತ್ತವೆ. ಧ್ವಂಸಕ್ಕೆ ಪ್ರತಿಯೋಗಿಯು ಅವಶ್ಯಕವಾಗಿರುವುದರಿಂದ ಈ ಅವಿದ್ಯಾತ್ರಯವೆಂಬ ಒಟ್ಟು ಮೊತ್ತವು ತಮಸ್ಸಿನಂತೆ ಭಾವರೂಪ ಎಂದು ಭಾವಿಸಬಹುದಾಗಿದೆ. ಅಜ್ಞಾನಂ ಕಲ್ಪನಾಮೂಲಂ ಕಲ್ಪನಾಜ್ಞಾನಸಂಭವಾ । ಅನ್ಯೋನ್ಯ ಪ್ರಭವೇ ಹ್ಯೇತೇ ಪರಸ್ಪರ ಸಮಾಶ್ರಯೇ । ದರ್ಶನಾತ್ತು ಪರಾವೃತ್ತ್ಯೈ ಸಹಮೂಲಂ ವಿನಶ್ಯತಿ ॥ ಅಂತು ನಾನು ಎಂಬ (ಅಹಂಕಾರ) ಮಿಥ್ಯಾಜ್ಞಾನವು-ಅವಿದ್ಯೆಯು ಸಮ್ಯಗ್‌ಜ್ಞಾನಕ್ಕೆ ಪ್ರಧಾನ ಪ್ರತಿಬಂಧಕವಾಗಿರುತ್ತದೆ.

ಈಗ ಪ್ರತಿಬಂಧಕಗಳಲ್ಲಿ ನಾಲ್ಕನೆಯದಾದ ಮಾಯೆ - ಮೋಹ ಎಂಬ ಪ್ರಮೇಯ ವಿಷಯವನ್ನು ವಿಚಾರ ಮಾಡೋಣ. ಮಾಯೆ ಎಂಬುದು ಸರ್ವಶಕ್ತನಾದ ಬ್ರಹ್ಮಚೈತನ್ಯವೇ ಆದ ಈಶ್ವರ = ಪರಮಾತ್ಮ ಚೇತನನಿಗಿಂತ ಬೇರೆ ವಸ್ತುವಾಗಿರುವುದಿಲ್ಲ. ಅದು (ಜೀವಾತ್ಮ ಪಕ್ಷದಲ್ಲಿ) ವಿಸ್ಮೃತಾತ್ಮನ ಮೌಢ್ಯ = ಸ್ವಭಾವವೇ ಅಥವಾ (ಪರಾತ್ಮ ಪಕ್ಷದಲ್ಲಿ) ಆತ್ಮಮಹಿಮೆ ಎಂದು ಗ್ರಹಿಸಬೇಕು. ಇದೇ ಅಪರಾ ಪ್ರಕೃತಿ ಎಂಬ ಪ್ರಮೇಯವಾಗಿದೆ. ಅದ್ಭುತ ಆತ್ಮಪ್ರಕೃತಿಯಾಗಿರುತ್ತದೆ. ಯಾ ಮಾ ಸಾ ಮಾಯಾ = ಯಾವುದನ್ನು ಕಂಡುಹಿಡಿಯಲು ಸಾಧ್ಯವಿಲ್ಲವೋ ಅದೇ ಮಾಯಾ ಪ್ರಕೃತಿಯು ಎಂದು ಬಲ್ಲವರು ತಿಳಿಸಿಕೊಡುತ್ತಿದ್ದಾರೆ. ಇದನ್ನು

ಶಬ್ದದ ಪ್ರತಿಧ್ವನಿಯಂತೆ ಅವಿದ್ಯೆಯ ಪ್ರತಿರೂಪ ಎಂದು ಬಗೆಯಬಹುದಾಗಿದೆ. ಇದು ಅನಾದಿಯೂ ಅನಿರ್ವಚನೀಯವೂ ಮತ್ತು ಆತ್ಮವಿಲಕ್ಷಣವೂ ಆಗಿದೆ. ಮಾಯೆಯು ಬ್ರಹ್ಮಾತ್ಮನಿಗೆ ಅನನ್ಯವಾಗಿದ್ದರೂ ಚಿಚ್ಛಕ್ತಿರೂಪವಲ್ಲ, ಜಡಶಕ್ತಿಯಾಗಿದೆ. (ಸತ್ವ ರಜಸ್ ತಮಸ್) ಗುಣತ್ರಯಾತ್ಮಕವಾಗಿದೆ. ಪರಿಣಾಮಗೊಳ್ಳುವುದಾಗಿದೆ. ಇದು ಅವ್ಯಕ್ತ = ಸೂಕ್ಷ್ಮ ಆಗಿರುವುದು. ತ್ರಿಗುಣಾತ್ಮಕವೂ ಅವ್ಯಕ್ತ ಪ್ರಕೃತಿಯೂ ಆದ ಈ ಮಾಯೆಯು ಶಕ್ತಿರೂಪವಾಗಿರುವುದರಿಂದಲೇ ಇದು ಕಾರ್ಯೋದ್ಭವ ಮಾಡುವುದು. ಆ ಮಾಯಾಕಾರ್ಯವನ್ನು ನೋಡಿ ಅದಕ್ಕೆ ಕಾರಣವಾಗಿ ಮಾಯೆಯನ್ನು ಊಹಿಸಬೇಕಲ್ಲದೇ ಸಾಕ್ಷಾತ್ ಮಾಯೆಯನ್ನು ನೋಡಲಾಗುವುದಿಲ್ಲ, ತಿಳಿಯಲಾಗುವುದಿಲ್ಲ. ಕಾರ್ಯೋದ್ಭವ ಮಾಡುವ ಸ್ವಭಾವದ ಈ ಮಾಯಾಶಕ್ತಿಯು ನಾಮರೂಪ ಪ್ರಪಂಚರೂಪವಾಗಿ ಪರಿಣಮಿಸಿದಾಗ ಎರಡು ಪ್ರಕಾರವಾಗಿ ಬೆಳೆದುಕೊಳ್ಳುವುದು. ಮೋಹಶಕ್ತಿ ಮತ್ತು ಕ್ರಿಯಾಶಕ್ತಿ ಎಂಬಿವು ಮಾಯಾಕಾರಣದಿಂದ ಆಗುವುವು. ಅಂದರೆ ಆತ್ಮಶಕ್ತಿಯೇ ಪ್ರಕಟವಾಗುವುವು. ಆತ್ಮಪ್ರಕೃತಿಯಾದ ಇಂತಹ ಮಾಯಾಶಕ್ತಿಯಿಂದ ನಾಮರೂಪ ಪ್ರಪಂಚವೆಲ್ಲಾ ಉಂಟಾಗಿ ತೋರಿಕೊಳ್ಳುತ್ತಾ ಇದ್ದು ಅದರಲ್ಲಿ ಪರಾಪ್ರಕೃತಿಯಾದ ಜೀವಚೈತನ್ಯ (ಆತ್ಮನೇ) ಮೋಹಗೊಂಡಿರುವಂತೆ ಆಗಿರುತ್ತದೆ. ಹೀಗೆ ಮಾಯಾಮೋಹ ಪ್ರಭಾವದಿಂದ ಮನುಷ್ಯಚೇತನನು ಸಂಸಾರಿಯಾಗಿರುವಂತೆ ತೋರುತ್ತಾನೆ. ಅಂದರೆ ಮನುಷ್ಯನ ನಿಜ ಆತ್ಮನು ವಾಸ್ತವದಲ್ಲಿ ಕೇವಲ ದೃಗ್‌ರೂಪ ಕೂಟಸ್ಥ ಸಾಕ್ಷಿಯಾಗಿದ್ದರೂ – ನಿತ್ಯಮುಕ್ತನೇ ಆಗಿದ್ದರೂ ಅವಿದ್ಯಾತ್ರಯಾವೃತನಾದ ಮನುಷ್ಯನು, ತನ್ನ (ಅವಿದ್ಯಾಕೃತ, ಕರ್ಮಸಂಸ್ಕಾರವೆಂಬ) ಉಪಾಧಿನಿಮಿತ್ತದಿಂದ ಪ್ರೇಕ್ಷಕ ಪ್ರಮಾತೃರೂಪನಾಗಿ ರೂಪಾಂತರಗೊಂಡಂತೆ ಆಗಿದ್ದು ಅವನು ಮಾಯಾರೂಪದ ದೃಶ್ಯಪ್ರಪಂಚವನ್ನು ನೋಡುತ್ತ ನೋಡುತ್ತಾ ಮೋಹಪರವಶನಾಗಿ, ನಾನು ಮನುಷ್ಯ = ಮರ್ತ್ಯ ಎಂದು ಭಾವಿಸಿಕೊಂಡಿರುತ್ತಾನೆ. ಇದೇ ಮೌಢ್ಯ ಸ್ವಭಾವದಿಂದ ಆಗುವ ಕಾರ್ಯವಾಗಿರುತ್ತದೆ. ದೇಹಾದಿ ಪ್ರಪಂಚವು ಮಾಯಿಕವಾಗಿದ್ದರೂ ಸತ್ಯವೆಂದು ಬಗೆದುಕೊಂಡಿರುತ್ತಾನೆ. (ಇದೇ ಮೋಹ ಶಕ್ತಿ ಕಾರ್ಯ) ತತ್ತ್ವಜ್ಞಾನ ವಿಷಯಕ್ಕೆ, ಅಧ್ಯಾತ್ಮ ವಿದ್ಯಾಭ್ಯಾಸ ವಿಷಯದಲ್ಲಿ ಉತ್ಸಾಹತಾಳದೇ ಉದಾಸೀನನಾಗಿರುತ್ತಾನೆ. ಇದೇ ಮೌಢ್ಯ. ಆದರೆ ಏನಾದರೊಂದು ಕರ್ಮದಲ್ಲಿ ತೊಡಗಿಕೊಂಡಿರುತ್ತಾನೆ.

ಅವಿದ್ಯಾಕೃತ ಕರ್ಮ = ಕರ್ಮಕಾರ್ಯ = ಕರ್ಮವಾಸನೆ.

ಇದೇ ಕ್ರಿಯಾಶಕ್ತಿಯ ಕಾರ್ಯ. ಅಂತು ಈ ಮಾಯಾ-ಮೋಹ ಎಂಬೆರಡೂ ಸಮ್ಯಗ್ಜ್ಞಾನಕ್ಕೆ ಪ್ರತಿಬಂಧಕಗಳಾಗಿರುತ್ತವೆ.

ಮೇಲೆ ವಿವರಿಸಿರುವಂತೆ ಮನುಷ್ಯನು ಮೌಢ್ಯದಿಂದ ಅಜ್ಞಾನಿಯಾಗಿದ್ದರೆ ಪ್ರಪಂಚಮಾಯಾಮೋಹ ಬಲೆಯಲ್ಲಿ ಸಿಕ್ಕಿಕೊಂಡು ಪರವಶನಾಗಿರುತ್ತಾನೆ. ಅಸ್ವತಂತ್ರನೂ ದೀನನೂ ಕೃಪಣನೂ ಆಗಿರುತ್ತಾನೆ. ಇಂತಿರುವವನಿಗೆ ವಿವೇಕ, ಸ್ವಪ್ರಜ್ಞೆ ಇರುವುದಿಲ್ಲವಾದ್ದರಿಂದ ಈ ಲೋಕದ ಜೀವನ ಪ್ರಸಂಗದಲ್ಲಿ ಸ್ವಪೂರ್ವಕರ್ಮನಿಮಿತ್ತದಿಂದ ಅನೇಕ ಪ್ರಕಾರವಾದ ಸಮಸ್ಯೆ, ಸಂಶಯ, ಚಿಂತೆ, ಭಯ, ಪ್ರಮಾದ, ಸಂಕಲ್ಪ, ವಿಕಲ್ಪ ಮುಂತಾದ ವಿಕಾರಗಳು ಮತ್ತು ಕ್ಲೇಶಗಳು ತಾಪತ್ರಯವು ಉಂಟಾಗುತ್ತಲೇ ಇರುತ್ತವೆ. ಸ್ವಂತ ವಿದ್ಯೆ ಇರುವುದಿಲ್ಲವಾದ್ದರಿಂದ ಇನ್ನೊಬ್ಬರು ಹೇಳಿದ್ದನ್ನು ನಂಬುವಂತೆ ಆಗುವುದು, ಲೋಕಸಮಾಜದಲ್ಲಿರುವ ಜನರು = ಮುಖ್ಯವಾಗಿ ಆಧುನಿಕ ವಿಜ್ಞಾನವಾದಿಗಳೆಂಬುವರು ನಾನಾ ತರಹ ವಾದಗಳನ್ನು ಒಡ್ಡುತ್ತಿರುತ್ತಾರೆ. ಅಂತಹವರ ಮಾತನ್ನು ಕೇಳುವಾಗ ಸಂದೇಹ ಬೆಳೆಯುವುದೇ ಹೊರತು ನಿಶ್ಚಯ ಜ್ಞಾನವುಂಟಾಗಲಾರದು ಮತ್ತು ಜ್ಞಾನೀಮಹಾತ್ಮರು ಹೇಳುವ ಮಾತಿನಲ್ಲಿ ಉಪದೇಶದಲ್ಲೂ ನಂಬಿಕೆ-ಶ್ರದ್ಧೆ ಉಂಟಾಗಲಾರದು. ಲೋಕದ ಪರಿಸ್ಥಿತಿಯು ಹೀಗಿರುವುದರಿಂದ ಪರಮಾರ್ಥನಿಶ್ಚಯಕ್ಕೆ ಪ್ರತಿಬಂಧಕಗಳಿರುತ್ತವೆ.

ಮನುಷ್ಯನಿಗೆ ಪ್ರಮಾಣದಿಂದಲೇ ವಸ್ತುಜ್ಞಾನ ಉಂಟಾಗಬೇಕು. ಬೆಳಕು ಇಲ್ಲದಿದ್ದರೆ ವಸ್ತು ತೋರುವುದಿಲ್ಲ ಎಂಬಂತೆ ಪ್ರಮಾಣವಿಲ್ಲದಿದ್ದರೆ ತತ್ವಜ್ಞಾನ ಆಗುವುದಿಲ್ಲ, ಆತ್ಮಸ್ವರೂಪಜ್ಞಾನ ಉಂಟಾಗಲೂ ಪ್ರಮಾಣವು ಬೇಕೇ ಬೇಕು. ಆದರೆ ಅಂತಹ ಪ್ರಮಾಣವು ಜನಸಮಾಜದಲ್ಲಿ ದುರ್ಲಭವಾಗಿದೆ. ಮನುಷ್ಯನಲ್ಲಿ ಸ್ವಾಧೀನವಾಗಿ ಮನ ಆದಿ ಇಂದ್ರಿಯಗಳು = ಜ್ಞಾನಸಾಧನಗಳಿದ್ದರೂ ಅವು ಹೊರಗಿನ ವಸ್ತು ವಿಷಯಗಳನ್ನು ತಿಳಿಸುವುವೇ ಹೊರತು ತಮ್ಮ ಒಳಗಿನ ಅಂತರಾತ್ಮನ ವಿಷಯವನ್ನು ತಿಳಿಸಿಕೊಡಲಾರವು. ಆದ್ದರಿಂದ ಮನುಷ್ಯನು ಸ್ವತಃ ಆತ್ಮಜ್ಞಾನಮಾಡಿಕೊಳ್ಳಲು ಶಕ್ಯವಿಲ್ಲ, ಆದ್ದರಿಂದಲೇ ಬ್ರಹ್ಮವಿದ್ಯೆ, ಗುಟ್ಟು, ರಹಸ್ಯ ಎಂದಾಗಿದೆ (ಎನ್ನುವರು). ಇಂತಹ ರಹಸ್ಯವನ್ನು ತಿಳಿಯಲು ಪ್ರಮಾಣವು ಇಲ್ಲವೋ ಎಂದರೆ, ಇದ್ದೇ ಇದೆ. ಆದರೆ ಸುಲಭವಾಗಿಲ್ಲ, ಪೇಟೆ ಸಂತೆಗಳಲ್ಲಿ ಸಿಕ್ಕುವುದಿಲ್ಲ, ಉಪನಿಷತ್ ಗುರೂಪದೇಶಗಳೇ ಈ ರಹಸ್ಯ ವಿದ್ಯೆಗೆ ಪ್ರಮಾಣವಾಗಿರುತ್ತವೆ.

ಚಿತ್ತವಿಕ್ಷೇಪವುಳ್ಳವರಿಗೆ ಅವು ಸುಲಭವಾಗಿರುವುದಿಲ್ಲ, ಸುಗಮವೂ ಆಗಿರುವುದಿಲ್ಲ. ಲೋಕ ವ್ಯವಹಾರದಲ್ಲಿ ಎಷ್ಟೇ ವಿದ್ಯಾವಂತರಾಗಿದ್ದರೂ ಈ ರಹಸ್ಯ ಅಧ್ಯಾತ್ಮ ವಿದ್ಯಾವಿಷಯದಲ್ಲಿ ಅವರು ಬಾಲಕರಂತೆಯೇ ಸರಿ. ಬಾಲಕರಿಗೆ ವಸ್ತು ಮಹತ್ವ ಮತ್ತು ಪ್ರಮಾಣಗಳ ಸ್ಥಾನ-ಬೆಲೆ ತಿಳಿದಿರುವುದಿಲ್ಲವಷ್ಟೆ! ಹಾಗೆಯೇ ಅವಿದ್ಯಾ ಮಾಯಾವಶರಾದವರಿಗೆ ಯಾವುದನ್ನು ಶ್ರದ್ಧಾ ವಿಶ್ವಾಸದಿಂದ ಹಿಡಿಯಬೇಕು? ಯಾವುದನ್ನು ವರ್ಜಿಸಬೇಕು? ಯಾವುದನ್ನು ನಂಬಬೇಕು ಯಾವುದನ್ನು ನಂಬಬಾರದು ಎನ್ನುವುದು ಗೊತ್ತಾಗಲಾರದು. ಆದ್ದರಿಂದಲೇ ಲೋಕ ವಿದ್ಯಾವ್ಯಾಸಂಗ ಮಾಡಿಕೊಂಡಿದ್ದವರೂ ಕೂಡ ಸಾಮಾನ್ಯ ಜನಗಳಂತೆ ಸ್ವಾತ್ಮನನ್ನು ಅರಿಯದೇ ಮರೆತುಕೊಂಡವರೇ ಆಗಿದ್ದು ಲೋಕವ್ಯವಹಾರದಲ್ಲೇ ಮೈಮರೆತಿರುತ್ತಾರೆ. ಆತ್ಮನನ್ನು ನೆನೆಯುವುದೇ ಇಲ್ಲ. ಅವರು ತಮ್ಮ ಆತ್ಮನನ್ನು ಮರೆತಿದ್ದರೂ ಅವರ ಆತ್ಮನು ಇದ್ದೇಇರುತ್ತಾನಷ್ಟೆ! ಆತ್ಮನನ್ನು ಮರೆತಿದ್ದರಿಂದ, ಅರಿಯದ್ದರಿಂದ ತಮ್ಮ ವ್ಯವಹಾರಕ್ಕೇನೂ ಅಡಚಣೆ ಯುಂಟಾಗಿಲ್ಲ ಎಂಬ ವ್ಯಾಮೋಹದಲ್ಲೇ ಮೌಢ್ಯದಲ್ಲೇ ಮುಳುಗಿರುತ್ತಾರೆ. ಆತ್ಮನನ್ನು ಅರಿಯದಿರುವುದರಿಂದಲೇ ಜನಗಳ ವ್ಯವಹಾರ ನಡೆಯಲು ಅನುಕೂಲವಾಗಿದೆ. ಹೀಗೆ ಸಂಸಾರವು ಸಾಗುತ್ತಿರುತ್ತದೆ. ತಪ್ಪುವುದೇ ಇಲ್ಲ. ಬ್ರಹ್ಮಾತ್ಮ ವಸ್ತುವು ಆವರಣರೂಪದ (ವಿಚಾರಹೀನತೆಯಾದ) ಅವಿದ್ಯಾ ಮಾತ್ರ ವ್ಯವಧಾನ = ಮರೆ ಇರುವುದರಿಂದ ಅದು ಪರೋಕ್ಷ-ದೂರದ್ದು ಎಂದಾಗಿಬಿಟ್ಟಿದೆ. ಆ ರಹಸ್ಯವಸ್ತುವನ್ನು ಗುರೂಪದೇಶ-ಪ್ರಮಾಣದಿಂದಲೇ ತಿಳಿದುಕೊಳ್ಳಬೇಕು. ಬೇರೆ ಉಪಾಯವಿಲ್ಲ. ಆತ್ಮಸ್ವರೂಪವು ಹೇಗಿರುವುದೋ ಅದು ಇರುವುದು ಇದ್ದಂತೆ ತಿಳಿಯುವುದೇ ವಿದ್ಯೆಯು. ಸ್ವಾತ್ಮನನ್ನು ಅರಿಯದಿರುವುದೇ ಅಜ್ಞಾನವು. (ಮನುಷ್ಯನು ತನ್ನನ್ನು ಅರಿತುಕೊಂಡಿಲ್ಲ ಇದು ಅಜ್ಞಾನವು. ದೇಹವನ್ನೇ ನಾನು ಎಂದು ನಂಬಿಕೊಂಡಿರುವುದು ತಪ್ಪು = ಅಜ್ಞಾನ. ಇವೆಲ್ಲವೂ ಅಜ್ಞಾನವೇ) ತನ್ನನ್ನು ತಪ್ಪಾಗಿ ತಿಳಿದುಕೊಂಡಿರುವುದೇ ಅವಿದ್ಯೆಯು.

ಭಗವದ್‌ಭಕ್ತಿ, ಗುರೂಪದೇಶದಲ್ಲಿ ಶ್ರದ್ಧೆ, ಸಜ್ಜನರ ಸಹವಾಸ ಇವುಗಳೇ ಸನ್ಮಾರ್ಗ ಸಾಧನೆಗಳಲ್ಲಿ ಪ್ರಧಾನವಾಗಿರುತ್ತವೆ. ಆತ್ಮಕಲ್ಯಾಣಮಯವಾದ ಈ ಶ್ರೇಯೋ ಮಾರ್ಗದಲ್ಲಿ ಪ್ರವೃತ್ತಿಯುಂಟಾಗದಿರುವುದಕ್ಕೆ ದೈವೀ ಸಂಪತ್ತಾದ ಈ

ಸಾಧನ ಸಂಪತ್ತು ಇಲ್ಲದಿರುವುದೇ ಕಾರಣವಾಗಿರುವುದು. ಆದ್ದರಿಂದ ಆತ್ಮಶ್ರೇಯೋಭಿಲಾಷೆಯುಳ್ಳ ಮನುಷ್ಯನು ಮೊಟ್ಟಮೊದಲು ಪ್ರತಿಬಂಧಕಗಳನ್ನು ಮೇಲೆ ವಿವರಿಸಿರುವಂತೆ ತಿಳಿದುಕೊಂಡು ಅವನ್ನು ಪರಿಹರಿಸಿಕೊಳ್ಳಬೇಕು. ಆಗಲೇ ಸನ್ಮಾರ್ಗದಲ್ಲಿ ಪ್ರವೃತ್ತಿಯುಂಟಾಗುವುದು, ಸಾಧನಾಭ್ಯಾಸವೂ ನಡೆಯುವುದು. ಈ ಅಧ್ಯಾತ್ಮ ವಿದ್ಯಾಭ್ಯಾಸದಿಂದ ಭಗವದ್ಭಕ್ತಿ ಉಂಟಾಗಿ ಮೇಲೆ ಹೇಳಿದ ಪ್ರತಿಬಂಧಕಗಳೆಲ್ಲವೂ ಕ್ರಮವಾಗಿ ತೊಲಗುವುವು. ಈ ಸ್ವಪ್ರಯತ್ನದಿಂದಲೇ ಅಮೋಘವಾದ ಅಮೂಲ್ಯವಾದ ಸ್ವಾತ್ಮಲಾಭವೂ ಆಗುವುದು.

ಈ ಅಧ್ಯಾತ್ಮ ವಿದ್ಯಾಸಾಧನಗಳು ಮುಖ್ಯವಾಗಿ ನಾಲ್ಕು ಎಂದು ಉಪದೇಶಿಸಿದ್ದಾರೆ. ೧. ನಿತ್ಯಾನಿತ್ಯ ವಸ್ತು ವಿವೇಕ*. ೨. ವೈರಾಗ್ಯ. ೩. ಶಮ ದಮಾದಿ ದೈವೀಸಂಪತ್ತು. ೪. ಮುಮುಕ್ಷುತ್ವ. ಅಂದರೆ ತಾನು ಸಂಸಾರತಾಪತ್ರಯ ಬಂಧನದಿಂದ ಬಿಡುಗಡೆ ಹೊಂದಲೇಬೇಕೆಂಬ ತೀವ್ರಾಭಿಲಾಷೆ. ಹೀಗೆ ಈ ನಾಲ್ಕು ಸಾಧನೆಗಳ ಅಭ್ಯಾಸ ನಡೆಯುತ್ತಿದ್ದರೆ ಭಗವದ್ಭಕ್ತಿಯು ಉಂಟಾದರೆ ಆಗ ಅಧ್ಯಾತ್ಮ ವಿದ್ಯಾಭ್ಯಾಸವು ಪುಷ್ಕಳವಾಗಿ ಬೆಳೆದು ಈ ಕ್ರಮದಿಂದಲೇ ಸಮ್ಯಗ್ಜ್ಞಾನ-ತತ್ತ್ವಜ್ಞಾನ = ಬ್ರಹ್ಮಜ್ಞಾನ ಉಂಟಾಗಿ ಪರಮ ಪುರುಷಾರ್ಥಪ್ರಾಪ್ತಿಯೂ ಆಗುವುದು. ಆಗಲೇ ಸ್ವಾತ್ಮನಲ್ಲಿ ನಿತ್ಯ ನಿವೃತ್ತವಾದ (ಎಂದೆಂದೂ ಇಲ್ಲದಿರುವ) ಅವಿದ್ಯೆಯು ಆತ್ಯಂತಿಕವಾಗಿ ನಿವೃತ್ತಿಹೊಂದಿದುದೂ ಮತ್ತು ನಿತ್ಯಪ್ರಾಪ್ತವಾದ (ಸ್ವಯಂ ಸಿದ್ಧವಾದ) ಮೋಕ್ಷವೂ ಗೊತ್ತಾಗುವುದು. ಇದೇ ಸ್ವಾತ್ಮ ಲಾಭವು = ಆತ್ಮನ ಅನುಸ್ಮೃತಿಯು, ಇದೇ ನಿಶ್ಶ್ರೇಯಸ್ಸು, ಇದೇ ಪರಮಸಿದ್ಧಿಯು. ಓಂ.



ಪೂಜ್ಯಾಯ ಶಂಕರಾಚಾರ್ಯಗುರವೇ ಜ್ಞಾನಚಕ್ಷುಷೇ।
ಭಜತಾಂ ಜ್ಞಾನದಾತ್ರೇಚ ಸದಾನಂದಾಯ ತೇ ನಮಃ॥

## ಅದ್ವೈತ ಸಿದ್ಧಾಂತಕ್ಕೆ ಸ್ವಾಭಾವಿಕ ಸಾಕ್ಷಿ ಪುರಾವೆ ಅಂದರೆ ತಳ್ಳಿಹಾಕಲಾಗದ ಯುಕ್ತಿ.

ಜೀವಾತ್ಮನು ಅಂದರೆ ಮನುಷ್ಯನು ಸೋऽಹಂ ಸೋऽಹಂ ಎಂದು

* ಆತ್ಮಾನಾತ್ಮವಿವೇಕ=ದೃಗ್‌ದೃಶ್ಯ ವಿವೇಕ.ಪ್ರಕೃತಿಪುರುಷ ವಿವೇಕ=ಕ್ಷೇತ್ರಕ್ಷೇತ್ರಜ್ಞ ವಿಭಾಗ.

ಉಸಿರಾಡುತ್ತಾ ಜೀವನ ಮಾಡುತ್ತಿರುವನು. ಅಂದಾಗ ಮನುಷ್ಯಾದಿ ಪ್ರಾಣಿಗಳ ಸ್ವಾಭಾವಿಕವಾದ ಉಸಿರಾಟದಿಂದ ಸೋಽಹಂ ಸೋಽಹಂ ಎಂಬ ಜಪವೇ ನಿರಂತರ ನಡೆಯುತ್ತಿರುವುದು. ಸರ್ವೇಷಾಂ ಪ್ರಾಣಿನಾಂ ದೇಹೇ ಜಪೋ ಭವತಿ ಸರ್ವದಾ। ಹಂಸಃ ಸೋಽಹಮಿತಿ ಜ್ಞಾತ್ವಾ ಸರ್ವಬಂಧೈಃ ಪ್ರಮುಚ್ಯತೇ ॥ ಶಂಕರ ಭಗವತ್ಪಾದ ವಚನಂ ॥ ಸೋಽಹಂ, ಸೋಽಹಂ ಎಂದಲ್ಲವೇ ಪ್ರಾಣಿಗಳ ಉಚ್ಛ್ವಾಸ ನಿಃಶ್ವಾಸರೂಪದ ಉಸಿರಾಟವಿರುವುದು! (ಸೋ = ಉಚ್ಛ್ವಾಸ (ಉಸಿರೆಳೆದುಕೊಳ್ಳುವುದು) ಹಂ = ನಿಃಶ್ವಾಸ (ಉಸಿರು ಬಿಡುವುದು) ಈ ಸೋಽಹಂ ಎಂಬ ಮಾತಿನ ಅರ್ಥವೇನೆಂದರೆ - ಸಃ + ಅಹಂ = ಅವನು ನಾನು. ಅಂದರೆ ನಾನು (ಜೀವಾತ್ಮನು) ಅವನೇ (ಪರಮಾತ್ಮನೇ). ಅಥವಾ ಅವನು ನಾನೇ = ನಾನು ಅವನೇ ಎಂಬರ್ಥವಿರುವುದು. ಮಾತು ಯಾವಾಗಲೂ ನಿಶ್ಚಯಾರ್ಥಕವೇ ಆಗಿರುವುದರಿಂದ ಈ ಅಭೇದಾರ್ಥವೇ ಸ್ವಾಭಾವಿಕಾರ್ಥವು = ನಿಶ್ಚಿತಾರ್ಥವು. ಇದೇ ವಸ್ತುಸ್ಥಿತಿಯು ಎಂದು ನಿಶ್ಚಯಿಸಿಕೊಳ್ಳಬೇಕು. ಇದು ಕೃತಕವಲ್ಲ, ಕಲ್ಪನೆ ಅಲ್ಲ, ಸಹಜ ಸಿದ್ಧಾರ್ಥವಾಗಿದೆ, ಸಿದ್ಧಾಂತವಾಗಿದೆ. ಈ ಸಿದ್ಧಾಂತಕ್ಕೆ ಅನುಗುಣವಾಗಿಯೇ ಮನುಷ್ಯಾದಿಗಳ ಉಸಿರಾಟವು ನಡೆಯುತ್ತಿರುವುದು. ಈ ಈಶ್ವರ - ಜೀವರು (ಪದಾರ್ಥಗಳು ಅಂದರೆ ವಸ್ತುಗಳು) ಅಭೇದವಾಗಿ ಇರುವಂತೆ ಈ ಪದಗಳೂ ನಿರಂತರವಾಗಿ ಕೂಡಿಕೊಂಡಿದ್ದು ಸ್ವಾಭಾವಿಕವಾಗಿಯೇ ಸೋಽಹಂ ಎಂದಾಗಿದೆ. ಈ ರೀತಿ ಜೀವರ ಉಚ್ಛ್ವಾಸ ನಿಃಶ್ವಾಸ ಪ್ರಕಾರ ಎಲ್ಲರ ಜೀವಾತ್ಮ ಮತ್ತು ಪರಮಾತ್ಮರ ಅಭೇದವೇ = ಆತ್ಮೈಕ್ಯವೇ ತತ್ತ್ವಸಿದ್ಧಾಂತವಾಗಿದೆ. ಜೀವನು ಈಶ್ವರನೇ ಆಗಿದ್ದಾನೆ ಎಂಬುದೇ = ಅದ್ವೈತವೇ ಪರಮಾರ್ಥವು. ತ್ವಂ ತದಸಿ ಎಂದು ವೇದಮಾತೆಯ ಉಪದೇಶವಿರುತ್ತೆ. ಅಹಮಸ್ಮಿ - ಬ್ರಹ್ಮಾಹಮಸ್ಮಿ ಎಂದೂ ಶ್ರುತಿವಾಕ್ಯವಿದೆ. ಹೀಗೆಂಬುದನ್ನು ತತ್ತ್ವವಿಚಾರ ಮಾಡಿಕೊಂಡೇ ಅರಿಯಬೇಕು. ಅನ್ಯಥಾ ತಿಳಿಯುವುದಿಲ್ಲ. ದ್ವೈತಿನೋಽತಥ್ಯದರ್ಶಿನಃ (ವಿ. ಪು. 2 & 14). ದ್ವೈತವಾದಿಗಳು ಪರಮಾರ್ಥವನ್ನು ಕಂಡುಕೊಂಡವರಲ್ಲ.

ಅಜಪಾ ನಾಮ ಗಾಯತ್ರೀ ಮುನೀನಾಂ ಮೋಕ್ಷದಾಯಿನೀ।
ಅಸ್ಯಾಃ ಸಂಕಲ್ಪಮಾತ್ರೇಣ ಸರ್ವಪಾಪೈಃ ಪ್ರಮುಚ್ಯತೇ ॥
ಹಕಾರೇಣ ಬಹಿರ್ಯಾತಿ ಸಕಾರೇಣ ವಿಶೇತ್ಪುನಃ।
ಹಂಸೋ ಹಂಸೇತಿ ಮಂತ್ರೇಣ ಜೀವೋ ಜಪತಿ ತತ್ತ್ವತಃ ॥

ಗಾರುಡೇ = ೧೫ - ೭೮ ಸೋಽಹಂ ಇದನ್ನು ಅಜಪಾಗಾಯತ್ರೀ ಎಂದಿದ್ದಾರೆ. ಈ ಸೋಽಹಂ ಎಂಬುದನ್ನು ಅಜಪಾಗಾಯತ್ರೀ ಎಂದು (ಜಪವಲ್ಲದ ಅನುಸಂಧಾನಕ್ಕೆ) ಉಪದೇಶಿಸಿದ್ದಾರೆ. ಏಕೆಂದರೆ ಸಃ = ಅವನು (ಈಶ್ವರಚೈತನ್ಯ

ಪರೋಕ್ಷ) ಅಹಂ = ನಾನು (ಜೀವಚೈತನ್ಯ ಪ್ರತ್ಯಕ್ಷ) ಈ ಪ್ರತ್ಯಕ್ಷ ಪರೋಕ್ಷ ಎಂಬ ಭೇದವನ್ನು ತ್ಯಜಿಸಿ (ಸೋಽಹಂ ಎಂಬಲ್ಲಿ ಪರೋಕ್ಷ ಪ್ರತ್ಯಕ್ಷ ವಾಚಕವಾದ ಸಕಾರ ಮತ್ತು ಹಕಾರಗಳನ್ನು ತ್ಯಜಿಸಿ) ಸಕಾರೋತ್ತರದ ಓಕಾರವನ್ನು ಮತ್ತು ಹಕಾರೋತ್ತರದ ಮ್ (ಅನುಸ್ವಾರವನ್ನು) ಜೋಡಿಸಿಕೊಂಡರೆ (ಅಪರೋಕ್ಷ ಏಕೈಕ ಚೈತನ್ಯವನ್ನೇ ವಿವಕ್ಷೆ ಮಾಡಿಕೊಂಡರೆ) ಓಂ ಎಂಬ ಪ್ರಣವಾಕ್ಷರವು ಸಿದ್ಧವಾಗುವುದು. ಈ ಓಂ ಎಂಬ ತಾರಮಂತ್ರವೇ ಸಂಸಾರನಾಶಕವಾದ ಮಹಾಮಂತ್ರವು.

ಇಲ್ಲಿ ಮತ್ತೊಂದು ವಿಷಯವೂ ತಿಳಿಯುತ್ತಿದೆ - ಅದೇನೆಂದರೆ ಸಂಸ್ಕೃತವು ದೇವ ಭಾಷೆ ಎನ್ನುತ್ತಾರಲ್ಲವೇ ? ಇದು ಅನ್ವರ್ಥವಾದ ಹೆಸರು. ಆತ್ಮದೇವನೇ ಆಗಿರುವ ಜೀವನು (ಮನುಷ್ಯನು) ತನ್ನ ಜೀವನೋಪಾಯ ವ್ಯವಹಾರಕ್ಕೆ ಮೂಲಾಧಾರವಾದ ಉಸಿರಾಟಕ್ಕೆ ಆದಿಯಿಂದಲೇ ಸೋಽಹಂ ಎಂದು ಸಂಸ್ಕೃತ ಭಾಷೆಯಲ್ಲೇ ತೊಡಗಿಕೊಂಡಿರುವುದರಿಂದ ಸಂಸ್ಕೃತವೇ ಮಾನವ = ಜೀವಾತ್ಮನ ಮೂಲಭಾಷೆ = ಸ್ವಂತಭಾಷೆ. ಮನುಷ್ಯ ಜಾತಿಯ ಜನ್ಮಭಾಷೆ ಆಗಿರುತ್ತೆಂದು ತಿಳಿಯುವುದು. ಇನ್ನು ಮಾತೃಭಾಷೆ ದೇಶಭಾಷೆ ರಾಷ್ಟ್ರಭಾಷೆ ವಿಶ್ವಭಾಷೆ ಎನ್ನುವುದು ಎಲ್ಲವೂ ಮನುಷ್ಯನಿಗೆ ಪರಭಾಷೆಯೇ ಆಗಿರುವುದೆಂದು ಮತ್ತು ಸಂಸ್ಕೃತವೇ ವಿಶ್ವಮಾನವ ಭಾಷೆ ಆಗಿರುವುದೆಂದು ನಿರ್ಣಯವಾಗುವುದು. ಈ ಪರಮಾರ್ಥವನ್ನರಿಯದವರು ಮೋಹದಿಂದ ಬೇರೆ ಭಾಷೆಯನ್ನು ತಮ್ಮ ಭಾಷೆ ಎಂದು ನಂಬಿಕೊಂಡಿರುವರು. ಅಂದಾಗ ಮನುಷ್ಯನಿಗೆ ಪರಮಾರ್ಥ ತತ್ತ್ವವನ್ನು ಅರಿಯಲು ಸಂಸ್ಕೃತವೇ ಅತ್ಯಂತ ಹತ್ತಿರದ = ಸ್ವಂತ = ಅನುಕೂಲವಾದ ಭಾಷೆ ಆಗಿರುತ್ತದೆ ಎಂದು ತಿಳಿಯುವುದು.



ಅಜ್ಞಾನಾಂಧಸ್ಯ ಲೋಕಸ್ಯ ಜ್ಞಾನಾಂಜನಶಲಾಕಯಾ।
ಚಕ್ಷುರುನ್ಮೀಲಿತಂ ಯೇನ ತಸ್ಮೈ ಶ್ರೀ ಗುರವೇ ನಮಃ॥

## ಪ್ರಪಂಚಸೃಷ್ಟಿ - ಜೀವ ಜಗತ್‌ಸಂಸಾರ

ಸೃಜ್ಯಮಾನಪ್ರಾಣಿಗಳ ಅಂದರೆ ಹಿಂದೆ ಪ್ರಳಯವಾದಾಗ ಮುಕ್ತರಾಗದೆ ಇದ್ದ ಅಜ್ಞಾನೀ ಜೀವರ ಕರ್ಮವಿಪಾಕ ದೆಸೆಯಿಂದಲೂ ಮತ್ತು ಆ ಜೀವರಿಗೆ ಕರ್ಮಫಲ ಭೋಗ ಪ್ರಾಪ್ತಿ ನಿಮಿತ್ತವಾಗಿಯೂ ಮತ್ತೆಮತ್ತೆ ಪ್ರಪಂಚಸೃಷ್ಟಿ ಪ್ರಸಂಗವಾಗುವುದು. ಹೀಗೆಂಬುದು ಕ್ರಮಸೃಷ್ಟಿ ಮತ್ತು ಯುಗಪತ್‌ಸೃಷ್ಟಿ ಈ

ಎರಡರಲ್ಲಿಯೂ ಸಮವಾಗಿರುತ್ತದೆ. ಈ ಜಗತ್‌ಸೃಷ್ಟಿಯ ಪ್ರಮೇಯವು ಪರಮಾರ್ಥಸತ್ಯವಲ್ಲದಿದ್ದರೂ ವ್ಯಾವಹಾರಿಕ ಸತ್ಯವಾಗಿರುವುದು. ಆಗ ಸೃಷ್ಟಿಮಾಡಲೆಣಿಸಿದ ಅದ್ವಿತೀಯ ಬ್ರಹ್ಮಚೈತನ್ಯವೇ ಈಶ್ವರನೆಂದಾಗುವನು. ಜ್ಞಾನಪ್ರಕಾಶಸ್ವರೂಪದ ಬ್ರಹ್ಮದೇವನ ಸೃಷ್ಟಿಸಂಕಲ್ಪವು ಇಚ್ಛಾರೂಪವಾದುದು. ಈ ಇಚ್ಛೆಯು ಅವನ ಜ್ಞಾನದ ಪ್ರಕಾರ ವಿಶೇಷವೇ. ಇದನ್ನೇ ಈಶ್ವರಮಾಯೆ ಎಂದು ಹೇಳುವರು. ಅಂದಾಗ ಮಾಯೆಯು ಬೇರೆ ಸ್ವತಂತ್ರ ಪ್ರಮೇಯವಾಗಿರುವುದಿಲ್ಲ. ಈಶ್ವರನು ಸ್ವಇಚ್ಛೆ ಎಂಬ ಮಾಯೆಯನ್ನು ಉಪಾಧಿಯನ್ನಾಗಿ ಮಾಡಿಕೊಂಡು ಪ್ರಪಂಚಸೃಷ್ಟಿ ಮಾಡಿರುವನು. ಆದ್ದರಿಂದ ಈಶ್ವರನ ಸ್ವಾತಂತ್ರ್ಯಕ್ಕೇನೂ ಹಾನಿಯಿಲ್ಲ. ಪುರುಷನು ನಾಟಕದಲ್ಲಿ ಸ್ತ್ರೀವೇಷ ಧರಿಸಿದ್ದರೆ ಅವನ ಪುಂಸ್ತ್ವಕ್ಕೇನೂ ಚ್ಯುತಿಯಾಗದಷ್ಟೆ ! ನಿರುಪಾಧಿಕ, ನಿರ್ವಿಶೇಷ ಸ್ವಭಾವದ ಅದ್ವಿತೀಯ ಬ್ರಹ್ಮಚೈತನ್ಯನ ಸೋಪಾಧಿಕವಾದ ಈ ವಿಶೇಷ ಸ್ವರೂಪವೇ ಈಶ್ವರ = ಪರಮಾತ್ಮ ಎಂದಾಗಿರುತ್ತದೆ. ಮನುಷ್ಯಜೀವಾತ್ಮರಿಗೆ ಅವರ ವಿಶೇಷರೂಪದ ಪರಿಚಯ ಮಾಡಿಕೊಡುತ್ತಾ ಬ್ರಹ್ಮಜ್ಞಾನ ಮಾಡಿಕೊಡಲೆಂದೇ ನಿರ್ವಿಶೇಷ ಬ್ರಹ್ಮಚೇತನನಲ್ಲಿ ಸೋಪಾಧಿಕ ಈಶ್ವರರೂಪದ ವಿಶೇಷ ಸ್ಥಿತಿಯನ್ನು ತಿಳಿಸಿಕೊಡಲಾಗುವುದು. ಏಕೆಂದರೆ - ಜಾತಿ, ಗುಣ, ಧರ್ಮ, ಕ್ರಿಯೆ, ಸಂಜ್ಞೆ, ಸಂಬಂಧ ಒಂದೂ ಇಲ್ಲದ ನಿರ್ವಿಶೇಷ ಬ್ರಹ್ಮ ಆತ್ಮನನ್ನು ಹೇಳಲೂ ಆಗದು, ತಿಳಿಯಲೂ ಆಗದು. ವಸ್ತುತಃ ಪರಬ್ರಹ್ಮವೂ ಈಶ್ವರನೂ ಬೇರೆ ಬೇರೆ ಅಲ್ಲ. ಜೀವಾತ್ಮನೂ ಬೇರೆ ಅಲ್ಲ. ಅಖಂಡ ಚೇತನ ಇರುವುದು ಒಂದೇ. ಏಕಮೇವಾಽದ್ವಿತೀಯಂ ಬ್ರಹ್ಮ. ನೇಹ ನಾನಾಸ್ತಿ ಕಿಂಚನ. ಏಕೋದೇವಃ ಸರ್ವಭೂತೇಷು, ಏಕಂ ಸದ್ ವಿಪ್ರಾಬಹುಧಾ ವದಂತಿ (ಶ್ರುತಿ ಪ್ರಮಾಣ) ಆ ಬ್ರಹ್ಮಚೈತನ್ಯ ಎಂಬ ಏಕೈಕಚೇತನನಿಗೆ ಸೋಪಾಧಿಕ ಈಶ್ವರರೂಪವು ಹೇಗೆ ಸವಿಶೇಷಸ್ಥಿತಿಯೋ ಹಾಗೆಯೇ ಜೀವರೂಪವೂ ಸವಿಶೇಷಸ್ಥಿತಿಯೇ ಆಗಿರುತ್ತದೆ ಎಂದು ಅರಿತುಕೊಳ್ಳಬೇಕು. ಈಶ್ವರಚೇತನನು ಜಗತ್‌ಸೃಷ್ಟಿಗೋಸ್ಕರ ಸರ್ವಕಾರ್ಯಸಮರ್ಥವಾದ ಮಾಯೆಯನ್ನು ಸ್ವ ಇಚ್ಛೆಯಿಂದ ಉಪಾಧಿಯನ್ನಾಗಿ ಸ್ವೀಕರಿಸಿರುವನು. ಅಜ್ಞಾನಿಗಳೇ ಆಗಿರುವ ಜೀವ ಚೇತನರಿಗೆ ತಮ್ಮತಮ್ಮ ಕರ್ಮಫಲವನ್ನು ಅನುಭವಿಸಲು ಅನಾದಿ ಅವಿದ್ಯೆಯು(ಸ್ವಸ್ವರೂಪವನ್ನು ಅರಿಯದಿರುವುದೆಂಬುದೇ ಅಜ್ಞಾನ = ಅವಿದ್ಯೆ). (ಕಾರ್ಯಸಹಿತ) ಉಪಾಧಿಯಾಗಿ

ಗಂಟುಬಿದ್ದಿರುತ್ತದೆ. ನಿರ್ವಿಶೇಷ ಮೂಲ ಏಕೈಕ ಚೇತನನಲ್ಲಿ ಭೇದವಿಶೇಷವೇನೂ ಇಲ್ಲ. ಚೇತನಾತ್ಮನ ಸುಷುಪ್ತಿಸ್ಥಿತಿಯಂತೆ ಪ್ರಲಯಸ್ಥಿತಿ ಎಂದೂ, ಪ್ರಬೋಧ (ಎಚ್ಚರ) ಪ್ರಥಮಕಾಲದಂತೆ ಮತ್ತು ಸ್ವಪ್ನದಂತೆ ಸೃಷ್ಟಿ ಆರಂಭಕಾಲ ಎಂದೂ ತಿಳಿಯಬೇಕು. ಈ ಆರಂಭ ಪ್ರಥಮಕಾಲದಲ್ಲೇ ಈಶ್ವರನು ಸೃಷ್ಟಿಸಂಕಲ್ಪಮಾಡಿರುವುದು. ಆಗ ಅಖಂಡಾದ್ವಿತೀಯಚೇತನನಾಗಿದ್ದವನೇ = (ಸರ್ವಾತ್ಮನೇ) ಬ್ರಹ್ಮಚೈತನ್ಯವೇ ಸೃಷ್ಟಿಸಂಕಲ್ಪವೆಂಬ ವಿಶೇಷದಿಂದ ಉಪಹಿತನಾದ್ದರಿಂದ ಪ್ರಾಜ್ಞ, ಅವ್ಯಾಕೃತ, ಈಶ್ವರ ಎಂದಾಗಿರುತ್ತಾನೆ. ಸುಷುಪ್ತಿಸ್ಥಾನದಲ್ಲಿ ಜೀವನೂ ಪ್ರಾಜ್ಞರೂಪನೇ ಆಗಿರುತ್ತಾನೆ. ಆದರೆ ಉಪಾಧಿಯು ಬೇರೆ ಬೇರೆ ಆಗಿರುತ್ತದೆ. ಅಖಂಡೈಕಚೈತನ್ಯವೇ = ಬ್ರಹ್ಮವೇ ಅವ್ಯಕ್ತಮಾಯಾ ಸಮಷ್ಟಿಕಾರಣೋಪಾಧಿಯಿಂದ ಈಶ್ವರ ಎಂದೂ ಅವಿದ್ಯಾ ಮಾಯಾ ವ್ಯಕ್ತಕಾರ್ಯ ವ್ಯಷ್ಟಿ ಶರೀರ ಉಪಾಧಿಯಿಂದ ಜೀವ ಎಂದೂ ಭೇದವು ಏರ್ಪಟ್ಟಿರುತ್ತದೆ. ಹೀಗೆಂಬ ವಿಶೇಷವನ್ನು ಅರಿತುಕೊಳ್ಳಬೇಕು. ಈಶ್ವರೋಪಾಧಿಯಾದ ಮಾಯೆಯು ಸರ್ವಕಾರ್ಯಗಳಿಗೂ ಮೂಲ ಕಾರಣ-ಮೂಲ ಪ್ರಕೃತಿಯಾಗಿರುವುದರಿಂದ ಅದನ್ನು ಶಕ್ತಿ ಎನ್ನುತ್ತಾರೆ. ಶಕ್ತಿಯೇ ಸಕಲಕಾರ್ಯಗಳ ಮೂಲವಾಗಿರುತ್ತದಲ್ಲವೇ! ಕಾರಣವಾಗಿರುವುದಲ್ಲವೇ! ಈ ಮಾಯಾ ಶಕ್ತಿಯು ಜಡಶಕ್ತಿಯಾಗಿದ್ದರೂ ಅದಕ್ಕೆ ಸದಾ ಈಶ್ವರ ಸನ್ನಿಧಿ = ವ್ಯಾಪ್ತಿ ಇರುವುದರಿಂದ ಅದು ಚಿಚ್ಛಕ್ತಿಯಂತೆಯೇ ವರ್ತಿಸಿಕೊಂಡಿರುವುದಾಗಿರುತ್ತದೆ. ಅಂದಾಗ ಈ ಮಾಯಾ ಶಕ್ತಿಯನ್ನು ಚಿಜ್ಜಡೋಭಯ ಶಕ್ತಿರೂಪ ಎಂದು ಪರಿಗಣಿಸಬಹುದು. ಈ ಉಭಯಾತ್ಮಕ ಶಕ್ತಿಯನ್ನು ಸಾಕ್ಷಾತ್ ನೋಡಲಾಗುವುದಿಲ್ಲ. ಶಕ್ತಿ ಎಂದರೆ ಕಾರ್ಯದ ಪೂರ್ವರೂಪ = ಕಾರಣ ಎಂದರಿಯಬೇಕು. ಈ ಶಕ್ತಿಯು ಕಾರಣವಾಗಿರುವುದರಿಂದಲೇ ಕಾರ್ಯೋದ್ಭವ ಮಾಡುವುದಾಗಿರುವುದು. ಅವ್ಯಕ್ತವಾದ ಮಾಯೆಯನ್ನು ನೋಡಲಾಗದಿದ್ದರೂ ಕಾರ್ಯವನ್ನು ನೋಡಿ ಇದನ್ನು ಊಹಿಸಿ ತಿಳಿಯಬಹುದು. ಚೇತನನು ಅವ್ಯಾಕೃತ ಪ್ರಾಜ್ಞಸ್ಥಿತಿಯಲ್ಲಿರುವಾಗ ಇಂತಹ ಮೂಲಪ್ರಕೃತಿಯು = ಅವ್ಯಕ್ತಮಾಯೆಯೇ ಉಪಾಧಿಯಾಗಿರುವ ಈಶ್ವರನು ಸರ್ವಜ್ಞನೇ, ಸರ್ವಶಕ್ತನೇ ಆಗಿರುವನು. ಅಲ್ಲದೇ ಚಿಜ್ಜಡೋಭಯಶಕ್ತಿಗಳ ಸ್ವಾಮಿಯೂ ಆಗಿರುತ್ತಾನೆ. ಹೀಗೆಂಬುದು ಕೇವಲ ಕಲ್ಪನಾ ಮಾತ್ರವಲ್ಲ. ಸುಷುಪ್ತಿಸ್ಥಾನದಲ್ಲಿರುವಾಗ ಮನುಷ್ಯಾದಿ ಸಕಲ ಪ್ರಾಣಿಗಳ ಅನುಭವವಾಗಿದೆ. ಪ್ರಾಜ್ಞಸ್ಥಿತಿಯೇ ಆಗಿರುತ್ತದೆ. (ನಿದ್ರಾಸ್ಥಿತಿಯಲ್ಲಿ

ಜೀವಾತ್ಮನ = ಪ್ರಾಜ್ಞನ ಎಲ್ಲಾ ಶಕ್ತಿಗಳೂ ಸುಪ್ತವಾಗಿರುತ್ತವೆ). ಆತ್ಮನಿಗೆ ಸುಷುಪ್ತಿಸ್ಥಾನದಿಂದ ಜಾಗ್ರತ್‌ಸ್ಥಿತಿ ಉಂಟಾಗುವಂತೆಯೇ ಪ್ರಳಯಸ್ಥಿತಿಯಿಂದ ಸೃಷ್ಟಿಸ್ಥಿತಿ ಅಥವಾ ಸ್ವಪ್ನಸ್ಥಿತಿಯಾಗುವುದೆಂದು ಚಿಂತಿಸಬೇಕು. ಅವ್ಯಕ್ತರೂಪದ ಮಾಯೋಪಾಧಿಯುಳ್ಳ ಅವ್ಯಾಕೃತಾತ್ಮನು (ಈಶ್ವರನು) ಸೃಷ್ಟ್ಯುನ್ಮುಖನಾಗುವಂತೆ ಅದೇ ಸಮಯದಲ್ಲಿ ಅವಿದ್ಯೋಪಾಧಿಯುಳ್ಳ ಪ್ರಾಜ್ಞರು (ಜೀವಾತ್ಮರು) ಜಾಗ್ರತ್ ಸ್ಥಾನಕ್ಕೆ ಅಥವಾ ಸ್ವಪ್ನಸ್ಥಾನಕ್ಕೆ ಬರುವರು. ಹೀಗೆ ಮಾಯಾ-ಅವಿದ್ಯಾಪ್ರಕೃತಿ ಎಂಬ ಶಕ್ತಿದ್ವಯಗಳು ವ್ಯಕ್ತಸ್ಥಿತಿಗೆ ಬರುವುದನ್ನು ಮನುಷ್ಯಾದಿ ಪ್ರಾಣಿಗಳ ಅಂತಃಕರಣದ ವೃತ್ತ್ಯುದ್ಗಮ = ಅಹಂವೃತ್ತಿ ಎನ್ನುತ್ತಾರೆ. ಇದೇ ನಾನು ಎಂಬ ಅರಿವು. ಈ ಶಕ್ತಿದ್ವಯ ರೂಪವೇನೆಂದರೆ - ಜ್ಞಾನಶಕ್ತಿ (ಚಿಚ್ಛಕ್ತಿ) ಮತ್ತು ಕ್ರಿಯಾಶಕ್ತಿ (ಜಡಶಕ್ತಿ) ಎಂದು ಎರಡು ಬಗೆಯಾಗಿದೆ. ಇವು ಯಾವಾಗಲೂ ಪ್ರಧಾನಭಾವ ಮತ್ತು ಉಪಸರ್ಜನಭಾವದಿಂದ ಇರುತ್ತವೆ. ಜ್ಞಾನವು ಪ್ರಧಾನವಾಗಿದ್ದರೆ ಕ್ರಿಯೆಯು ಉಪಸರ್ಜನವಾಗಿರುತ್ತದೆ. ಕ್ರಿಯೆಯು ಪ್ರಧಾನವಾಗಿದ್ದರೆ ಜ್ಞಾನವು ಉಪಸರ್ಜನವಾಗಿರುತ್ತದೆ. ಈ ಉಭಯಾತ್ಮಕ ಶಕ್ತಿ ಸಮಷ್ಟಿರೂಪದ ಅಹಂವೃತ್ತಿ ಚೇತನನೇ ಈಶ್ವರನಾಗಿರುತ್ತಾನೆ. ಈ ಉಭಯಾತ್ಮಕ ಶಕ್ತಿ ವ್ಯಷ್ಟಿರೂಪದ ಅಹಂ ವೃತ್ತಿಚೇತನರೇ ಜೀವಾತ್ಮರಾಗಿರುತ್ತಾರೆ. ಹೀಗೆ ಸೃಷ್ಟಿಯ ಆರಂಭದಲ್ಲೇ ಉಪಾಧಿ ಮೂಲಕವಾಗಿ ಏಕಚೇತನನಲ್ಲಿ ಈಶ್ವರ - ಜೀವ ಎಂಬ ಭೇದವು ಏರ್ಪಟ್ಟುಕೊಂಡಿರುತ್ತದೆ ಮತ್ತು ಅನಾದಿಯಾದ ಅವಿದ್ಯಾ ಎಂಬ ಉಪಾಧಿಯು ಕಾರ್ಯಸಹಿತವಾಗಿಯೇ ಜೀವರಿಗೆ ಅಂಟಿಕೊಂಡಿರುವುದರಿಂದ ಅವರಲ್ಲಿ ಮತ್ತೆ ಮಾಯಾಮೋಹವೂ ಮುಸುಕಿರುವುದು. ಜೀವೋಪಾಧಿಯಾದ ಅವಿದ್ಯಾಕೃತ ಕರ್ಮಶಕ್ತಿ ಎಂಬ ಮೂಲ ಪ್ರಕೃತಿಯೂ ಈಶ್ವರೋಪಾಧಿಯಾದ ಮಾಯೆ ಎಂಬ ಮೂಲಪ್ರಕೃತಿಯೂ (ಉಭಯಶಕ್ತಿಗಳೂ) ಕಾರ್ಯೋದ್ಭವ ಮಾಡುವ ಕಾರಣರೂಪರಾಗಿರುವುದರಿಂದ ಸೃಷ್ಟಿಕಾಲದಲ್ಲಿ ಸಮಸಮವಾಗಿಯೇ, ಏಕಕಾಲದಲ್ಲಿ ಏಕಪ್ರಕಾರವಾಗಿಯೇ ಪರಿಣಾಮಗೊಳ್ಳುತ್ತಾ ಕಾರ್ಯೋದ್ಭವ ಮಾಡುವುವು. ಅದರಲ್ಲಿ ಪೂರ್ವಾಪರಭಾವವಿರುವುದಿಲ್ಲ, ಇದೇ ಪ್ರಪಂಚಸೃಷ್ಟಿ ಎಂಬ ಪ್ರಮೇಯವಾಗಿರುತ್ತದೆ. ಇದನ್ನು ಆಕಾಶ, ವಾಯು ಮೊದಲಾಗಿ ಕ್ರಮಸೃಷ್ಟಿ ಎಂದು ವರ್ಣಿಸುತ್ತಾರೆ. ಜಾಗರಸ್ವಪ್ನಗಳು ಯುಗಪತ್‌ಸೃಷ್ಟಿ ಎಂದು ತಿಳಿಸಿಕೊಡುತ್ತಾರೆ. ಉಪಾಧಿ ಅಂದರೆ

ಪ್ರತಿನಿಯತ ದೇಶಕಾಲ ನಿಮಿತ್ತ ಕ್ರಿಯಾ ಫಲಾಶ್ರಯ = ಜಗತ್

ಉಪಲಬ್ಧ್ಯಧಿಷ್ಠಾನ, ಎಂದರೆ ಅತೀಂದ್ರಿಯವಾದ ಸೂಕ್ಷ್ಮ ವಸ್ತುವನ್ನು ಕಂಡುಕೊಳ್ಳುವ ದ್ವಾರ - ಉಪಾಯ - ಸ್ಥಳ ಎಂದು ತಿಳಿಯಬೇಕು. ಈಶ್ವರನು ಮಾಯೆ ಎಂಬ ಮಹೋಪಾಧಿಯುಳ್ಳವನಾದ್ದರಿಂದ ಸರ್ವಜ್ಞನು ಸರ್ವಶಕ್ತನು ಸೃಷ್ಟಿಕರ್ತನೂ ಆಗಿರುತ್ತಾನೆ. ಅವಿದ್ಯೆ ಎಂಬ ಜ್ಞಾನಾವರಣರೂಪದ ಕ್ಷುದ್ರೋಪಾಧಿಯ ಜೀವರು ಅಲ್ಪಜ್ಞ, ಅಲ್ಪವೀರ್ಯ, ಭೋಕ್ತೃ, ಪ್ರಮಾತೃ, ಸಂಸಾರಿಗಳು ಆಗಿರುತ್ತಾರೆ.

ಅದ್ವೈತ ಬ್ರಹ್ಮಾತ್ಮನಲ್ಲಿ ವಾಸ್ತವವಾಗಿ ಮಾಯೆಯೂ ಇರುವುದಿಲ್ಲ, ಅವಿದ್ಯೆಯೂ ಇರುವುದಿಲ್ಲ, ಯಾ ಮಾ ಸಾ ಮಾಯಾ = ಅಲ್ಲದಿರುವುದಕ್ಕೇ ಮಾಯೆ ಎನ್ನುವರು. ಹಾಗೆಯೇ ಜ್ಞಾನಸ್ವರೂಪದ ಆತ್ಮನಲ್ಲಿ ಅವಿದ್ಯೆಯೂ ಇರುವುದಿಲ್ಲ, ನ ವಿದ್ಯತೇ ಇತ್ಯವಿದ್ಯಾ ಅವಿದ್ಯಮಾನವಾದುದೇ ಅವಿದ್ಯೆ ಎಂದು ಜಿಜ್ಞಾಸುಗಳಿಗೆ ತತ್ವಜ್ಞಾನವಾದ ಬಳಿಕ ತಾನೇ ಗೊತ್ತಾಗುವುದು. ಆವರೆಗೆ ಜೀವ ಎಂಬ ಪ್ರೇಕ್ಷಕ ಪ್ರಮಾತೃವು = ಮನುಷ್ಯನು ಅಜ್ಞಾನಿಯೇ ಆಗಿರುತ್ತಾನೆ ಮತ್ತು ಮಾಯೆಗೆ ವಶವಾಗಿಯೇ ಇರುತ್ತಾನೆ. ಸಂಸಾರಿಯಾಗಿ ಇರುತ್ತಾನೆ. ಚಿಕಿತ್ಸಾರಹಿತೋರೋಗೋ ಮಾನವಂ ಬಾಧತೇ ಯಥಾ । ಅಪ್ರಬೋಧಸ್ತಥಾ ನಿದ್ರಾಸ್ವಪ್ನದೋಷಃ ಪ್ರಬಾಧತೇ॥

## ನಿರ್ವಿಶೇಷ ಬ್ರಹ್ಮಾತ್ಮನನ್ನು ತಿಳಿಸಿಕೊಡುವ ಉಪಾಯ

ಅಧ್ಯಾರೋಪಾಪವಾದಾಭ್ಯಾಂ ನಿಷ್ಪ್ರಪಂಚಂ ಪ್ರಪಂಚ್ಯತೇ।
ಶಿಷ್ಯಾಣಾಂ ಬೋಧಸಿದ್ಧ್ಯರ್ಥಂ ವಿಪಶ್ಚಿತ್ಕಲ್ಪಿತಃ ಕ್ರಮಃ॥

ಮನುಷ್ಯರು ಸ್ವಾಭಾವಿಕವಾಗಿ ಅಂದರೆ ಅವಿಚಾರಿತವಾಗಿ ತಿಳಿದುಕೊಂಡಿರುವುದೇನೆಂದರೆ ನಾನು ಹುಟ್ಟಿದ್ದೇನೆ. ನಾನು ಮನುಷ್ಯ, ನಾನು ದೇಹೀ, ನಾನು ಕರ್ಮಕರ್ತೃ. ನಾನು ಸುಖ ದುಃಖ ಭೋಕ್ತೃ ಎಂಬುದಾಗಿ ತಮ್ಮ ಆತ್ಮನಲ್ಲಿ ಆರೋಪಮಾಡಿಕೊಂಡಿರುತ್ತಾರೆ. ಮತ್ತು ಮಾಯಾ ಕಾರ್ಯವಾದ ದೇಹೇಂದ್ರಿಯಾದಿಗಳಲ್ಲಿ (ದೇಹಾದಿಗಳು ಮಾಯಾಕೃತ ಎಂಬುದನ್ನು ಮುಂದೆ ಸಮರ್ಥಿಸಲಾಗುವುದು) ನಾನು ಎಂದು ಆತ್ಮನನ್ನು ಅಧ್ಯಾಸ ಮಾಡಿಕೊಂಡಿರುತ್ತಾರೆ. ಇದು ತಪ್ಪು ತಿಳಿವಳಿಕೆಯಾಗಿರುತ್ತದೆ. ಈ ಭ್ರಾಂತಿಯನ್ನು ಹೋಗಲಾಡಿಸಲು ಶಾಸ್ತ್ರವು (ಜೀವರಿಗೆ ಅಪರ) ಪರಮಾರ್ಥ ಸತ್ಯಸ್ಥಿತಿಯನ್ನು ಬೋಧಿಸುವುದಕ್ಕಾಗಿಯೇ ಪ್ರಪಂಚಸೃಷ್ಟಿ ಎಂಬ ಪ್ರಮೇಯವನ್ನು ಒಡ್ಡಿದೆ. ಅಂದರೆ ನಿರುಪಾಧಿಕ ಬ್ರಹ್ಮಚೈತನ್ಯನಲ್ಲಿ ಈಶ್ವರ ಎಂಬ ಮಾಯೋಪಾಧಿಯ = ಅಧ್ಯಾರೋಪವುಳ್ಳ ಚೇತನನ ಸ್ಥಿತಿಯನ್ನು

ತೋರ್ಪಡಿಸಿದೆ ಇದೇ ಸೃಷ್ಟಿಪ್ರಮೇಯವು. ಹೀಗೆ ಚೈತನ್ಯನಲ್ಲಿ ಅಧ್ಯಾರೋಪವನ್ನು ವರ್ಣಿಸಿ ಕೊನೆಯಲ್ಲಿ ಈ ಆರೋಪವೆಲ್ಲಾ ಮಿಥ್ಯಾ ಎಂದು ತಿಳಿಯುವಂತೆ ಈಶ್ವರನಲ್ಲಿ ಉಪಾಧಿಯಾಗಿರುವುದು ಮಾಯೆ ಎಂದೂ ಹುಸಿಯೆಂದೂ ತಿಳಿಸುತ್ತಾ ಜೀವಚೇತನರ ಉಪಾಧಿಯಾದ ಬುದ್ಧಿ ಮೊದಲಾದವೆಲ್ಲವೂ ಪ್ರಪಂಚದಲ್ಲಿಯೇ ಸೇರಿರುವುದರಿಂದ ಅವೂ ಮಿಥ್ಯೆಯೆಂದೇ ತಿಳಿಸಿಕೊಡುತ್ತಿದೆ. ಅಂದರೆ ಅರಿಯುವ ಚಿಚ್ಛಕ್ತಿಯು = ಜೀವಚೇತನನು ದೇಹಾದಿ ನಾಮರೂಪಗಳಿಗೆಲ್ಲಾ ಸಾಕ್ಷಿಯಾಗಿರತಕ್ಕ ಅವನು ಬೇರೆ. ಸಾಕ್ಷಿಚೇತನನು ಆತ್ಮನಾಗಿದ್ದಾನೆ. ಆತ್ಮನು ದೇಹವಲ್ಲ. ದೇಹವು ಆತ್ಮನಲ್ಲ. ಆತ್ಮನು ಹುಟ್ಟುವುದಿಲ್ಲ. ಕರ್ತೃವೂ ಅಲ್ಲ, ಭೋಕ್ತೃವೂ ಅಲ್ಲ ಎಂದು ಅಪವಾದ ಮಾಡಿದೆ. ದೇಹಾದಿಗಳನ್ನು ನಿರಾಕರಣೆ ಮಾಡಿಕೊಂಡಬಳಿಕ ಉಳಿಕೆಯಾಗುವ ಮನುಷ್ಯನು = ಆತ್ಮನು ಅಸಂಸಾರಿ ಬ್ರಹ್ಮ ಆತ್ಮ ಎಂದು ಅರಿತುಕೊಳ್ಳುವುದೇ ಸಮ್ಯಗ್ ಜ್ಞಾನವು.

ಮನುಷ್ಯರ ಮನಸ್ಸು ಬುದ್ಧಿ ಮತ್ತು ಚಕ್ಷುರಾದಿ ಇಂದ್ರಿಯಗಳು ಬಹಿರ್ಮುಖವಾಗಿಯೇ ಇರುತ್ತಿದ್ದು ಅವು ಬಾಹ್ಯದಲ್ಲಿ ತಮ್ಮ ಮುಂದೆ ಇರುವ ಶಬ್ದ = ನಾಮ, ರೂಪ, ಆಕೃತಿ ಮುಂತಾದ ವಿಷಯಗಳನ್ನು ಗ್ರಹಿಸುವವೇ ಹೊರತು ತಮಗೆ ಹಿನ್ನೆಲೆಯಾಗಿರುವ ತಮಗೆ ಕಾರಣ-ಆಧಾರವಾದ ಆತ್ಮನನ್ನು ಗ್ರಹಿಸಲಾರವು. ತಿಳಿಸಿಕೊಡಲಾರವು. ಸ್ವಬುದ್ಧಿಯಿಂದ ಎಷ್ಟೇ ತರ್ಕ ಮಾಡಿದರೂ ದೇವರು - ಆತ್ಮಸ್ವರೂಪದ ನಿಶ್ಚಯ ನೆಲೆ ಸಿಕ್ಕುವುದಿಲ್ಲ. ಆದ್ದರಿಂದ ಈ ಆಧ್ಯಾತ್ಮಿಕ ಪ್ರಮೇಯಗಳಲ್ಲಿ ಸಂಭವಿಸಿಕೊಂಡಿರುವ ಸೂಕ್ಷ್ಮಾಂಶಗಳನ್ನು ಜಿಜ್ಞಾಸುಗಳು ಕ್ರಮವಾಗಿ ತಿಳಿದುಕೊಳ್ಳಲೆಂದೇ ಪರಮಾರ್ಥ ಸತ್ಯಾತ್ಮನ ಸಮ್ಯಗ್ ಜ್ಞಾನ (ನಿಶ್ಚಯ ಜ್ಞಾನ) ಮಾಡಿಕೊಳ್ಳಲೆಂದೇ ಪ್ರಪಂಚಸೃಷ್ಟಿ, ಅವಸ್ಥಾತ್ರಯ, ಪಂಚಕೋಶಪ್ರಮೇಯ, ಕಾರ್ಯಕಾರಣಭಾವ ಮುಂತಾದ ಪ್ರಕ್ರಿಯೆಗಳನ್ನು ಕಲ್ಪಿಸಿ-ರಚಿಸಿ ಪರಮಾರ್ಥತತ್ತ್ವವನ್ನು ಪ್ರತಿಪಾದನೆ ಮಾಡುವುದೇ ಸಂಪ್ರದಾಯವಾಗಿದೆ. ಮನೋವಾಗಗೋಚರನಾದ ಸತ್ಯಾತ್ಮನನ್ನು ತಿಳಿಸಿಕೊಡುವುದೇ ಈ ಅಧ್ಯಾರೋಪದ ಉದ್ದೇಶವಾಗಿರುತ್ತದೆ. ಹೀಗೆ ಬ್ರಹ್ಮವಿದ್ಯೆಯು ರಹಸ್ಯವಿದ್ಯೆಯೇ ಆಗಿದೆ.

ಅವ್ಯಕ್ತಪ್ರಕೃತಿಯಾದ ಮಾಯಾಶಕ್ತಿ ಎಂಬ ಕಾರಣ ಸಮಷ್ಟಿ ಉಪಾಧಿಯುಳ್ಳ ಚೇತನನೇ ಈಶ್ವರನು. ಅವಿದ್ಯಾಮಾಯಾಕೃತ ಕರ್ಮ ವ್ಯಕ್ತಕಾರ್ಯವಾದ ವ್ಯಷ್ಟಿರೂಪ ದೇಹ = ಪಂಚಕೋಶ ಉಪಾಧಿಯುಳ್ಳ ಚೇತನರೇ = ಜೀವರು. (ಸಮಷ್ಟಿ =

ಒಟ್ಟುಮೊತ್ತ, ವ್ಯಷ್ಟಿ= ಬಿಡಿಬಿಡಿ) ಮೂಲಸ್ವರೂಪವಾದ ಶುದ್ಧ ಚೇತನನು ಒಬ್ಬನೇ. ಅವನೇ ಪ್ರತ್ಯಗಾತ್ಮನು = ಸರ್ವಾತ್ಮನು ನಿತ್ಯ ಶುದ್ಧ ಬುದ್ಧ ಮುಕ್ತಸ್ವಭಾವನು ಪರಮಾತ್ಮನು ಎಂದು ತಿಳಿಯಬೇಕು.

ಪ್ರಪಂಚಸೃಷ್ಟಿಯ ಆರಂಭದಲ್ಲೇ ಅವ್ಯಾಕೃತ-ಪ್ರಾಜ್ಞ ಎಂಬ ಅಹಂವೃತ್ತಿಯ ಏಕಚೇತನನಲ್ಲೇ ಮಾಯಾ ಅವಿದ್ಯಾ ಎಂಬ ಆತ್ಮಪ್ರಕೃತಿಯು ಈಶ್ವರ-ಜೀವ ಎಂಬ ವಿಭಾಗವನ್ನುಂಟು ಮಾಡಿರುತ್ತದೆಂದು ಹಿಂದೆ ತಿಳಿಸಿದೆ. ಈ ವಿಭಾಗವುಂಟಾದ್ದರಿಂದಲೇ ಭೋಕ್ತೃ ಭೋಗ್ಯ ಮತ್ತು ಪ್ರೇರಕ ಎಂಬ ಭೇದವೂ ಉಂಟಾಗಿರುತ್ತದೆ. ಅಂದರೆ ಸಂಸಾರಿಗಳಾದ ಭೋಕ್ತೃ = ಜೀವರು ಲೋಕದಲ್ಲಿ ಜೀವನ ನಡೆಸಲು ತಮ್ಮತಮ್ಮ ಕರ್ಮಫಲವನ್ನು ಅನುಭವಿಸಲು ಪ್ರತ್ಯಗಾತ್ಮನೇ ಆಗಿರುವ ಈಶ್ವರನು ಮನ ಆದಿ ಭೋಗೋಪಕರಣಗಳನ್ನು, ಭೋಗಾಯತನ = ದೇಹಗಳನ್ನು ಮತ್ತು ನಾಮರೂಪ ಭೋಗ್ಯವಸ್ತುಗಳನ್ನು ಜೀವರಿಗೆ ನಿರ್ಮಾಣ ಮಾಡಿಕೊಟ್ಟಿದ್ದಾನೆ. ಈಶ್ವರನು ತನ್ನ ಸನ್ನಿಧಿ ಮಾತ್ರದಿಂದ ಪ್ರೇರಕನಾಗಿರುವನು. ಮಾಯಾಪ್ರಕೃತಿ ಪರಿಣಾಮದಿಂದ ನಾಮರೂಪ ದೇಹಾದಿ ಪ್ರಪಂಚಕಾರ್ಯೋದ್ಭವವಾಗಿದ್ದು ಇದರಿಂದ ಈಶ್ವರನ ಶಕ್ತಿ-ಮಹಿಮೆಯೇ ಪ್ರಕಟವಾಗುವುದು. (ಈಶ್ವರ ಶಕ್ತಿಯ ಅಸ್ತಿತ್ವವು ಊಹಿಸಲ್ಪಡುವುದು) ಅವ್ಯಕ್ತವೇ ಆಗಿರುವ ಶಕ್ತಿಯು ಯಾವಾಗಲೂ ಪರಾವಲಂಬಿ. ಸ್ವತಂತ್ರವಾಗಿರುವುದಿಲ್ಲ, ಆತ್ಮನನ್ನೇ ಆಶ್ರಯಿಸಿಕೊಂಡಿರುತ್ತದೆ. ಈಶ್ವರನ ಸಾನ್ನಿಧ್ಯವಿರುವುದರಿಂದ ಶಕ್ತಿಸ್ವರೂಪದ ಮಾಯೆಯು ಸ್ವಯಂ ಜಡಪ್ರಕೃತಿಯಾಗಿದ್ದರೂ ಚೈತನ್ಯವುಳ್ಳದ್ದಂತೆ ಪ್ರವರ್ತಿಸುವುದಾಗಿರುತ್ತದೆ. ಬೆಂಕಿಯೇ ಸುಡುವುದಾಗಿದ್ದರೂ ಕಾದಿರುವ ನೀರು ಸುಡುತ್ತದೆ ಎಂಬಂತೆ ಈಶ್ವರ ಸನ್ನಿಧಿ ಇರುವ ಮಾಯಾ ಜಡಪ್ರಕೃತಿಯೂ ಚೇತನನಂತೆ ವರ್ತಿಸಿಕೊಂಡಿರುತ್ತದೆ. ಇದನ್ನೇ ಸ್ವಭಾವಸ್ತು ಪ್ರವರ್ತತೇ ಎಂದು ಶಾಸ್ತ್ರಗಳು ತಿಳಿಸಿವೆ. ಹೀಗೆ ಜ್ಞಾನಶಕ್ತಿಪ್ರಧಾನವಾದ ಕಾರಣಸಮಷ್ಟಿರೂಪದ ಅವ್ಯಕ್ತ ಮಾಯೋಪಾಧಿಯಿಂದ ಈಶ್ವರನಲ್ಲಿರುವ ಜಗತ್‌ಸೃಷ್ಟಿ ಶಕ್ತಿಯೂ ಭೋಗ್ಯವಸ್ತು ನಿರ್ಮಾಣಶಕ್ತಿಯೂ ವ್ಯಕ್ತವಾಗುವುದು. ಅವಿದ್ಯಾಮಾಯಾಕೃತ ಕರ್ಮಕಾರ್ಯವಾದ ಕ್ರಿಯಾಶಕ್ತಿಪ್ರಧಾನವಾದ ವ್ಯಕ್ತ ವ್ಯಷ್ಟಿ ದೇಹೋಪಾಧಿಯಿಂದ ಜೀವಾತ್ಮರಲ್ಲಿರುವ ಭೋಕ್ತೃತ್ವ, ಕರ್ತೃತ್ವ, ಪ್ರಮಾತೃತ್ವಾದಿ ಚಿಚ್ಛಕ್ತಿಗಳು ಮತ್ತು ಗತಿಗಮನಾದಿ ಕ್ರಿಯಾಶಕ್ತಿಗಳು ವ್ಯಕ್ತವಾಗುವುವು.

ಹಾಗೂ ವಾಯು ಅಗ್ನಿ ಮುಂತಾದ ಭೂತವಸ್ತುಗಳಲ್ಲಿ ಮಾಯಾ ಜಡಶಕ್ತಿಯು = ವ್ಯಕ್ತವಾಗುವುದು.

ಪರಮಾರ್ಥ ತತ್ತ್ವವನ್ನರಿಯದಿರುವವನ ದೃಷ್ಟಿಯಿಂದ ಬ್ರಹ್ಮಾತ್ಮನೇ ಮಾಯೆಗೂ ಮತ್ತು ಅವಿದ್ಯೆಗೂ (ಸಂಸಾರಾನುಭವಕ್ಕೂ) ಆಶ್ರಯನೂ ಮತ್ತು ವಿಷಯನೂ ಆಗಿರುವನು. (ಒಬ್ಬ ಬ್ರಹ್ಮಚೈತನ್ಯವಲ್ಲದೇ ಬೇರೆ ಚೈತನ್ಯವೇ ಇರುವುದಿಲ್ಲ ಇದೇ ಸಿದ್ಧಾಂತವಾಗಿದೆ) ಪ್ರಮಾಣವಾದ ವೇದವು ಏಕಮೇವಾದ್ವಿತೀಯಂ ಬ್ರಹ್ಮ ನೇಹ ನಾನಾಸ್ತಿ ಕಿಂಚನ ಎಂದು ಐಕ್ಯ, ಅವಧಾರಣೆ, ಪರಪ್ರತಿಷೇಧ ಮಾಡಿ ಉಪದೇಶಿಸಿದೆ. ಮನುಷ್ಯನು ತತ್ತ್ವವಿಚಾರ ಮಾಡಿಕೊಂಡು ವಾಸ್ತವಸ್ಥಿತಿಯನ್ನರಿತು ನಿರುಪಾಧಿಕ ಪರಮಾರ್ಥ ಸತ್ಯಾತ್ಮಾನುಭವ ಮಾಡಿಕೊಂಡಾಗ ಅಂದರೆ ಎಚ್ಚರದಲ್ಲಿ ಎಚ್ಚರ ಮಾಡಿಕೊಂಡಾಗ ಅವಿದ್ಯೆಯೂ ಮಾಯೆಯೂ ಇಲ್ಲದ ತನ್ನ ನಿಜಾತ್ಮಸ್ವರೂಪವು ನಿತ್ಯ ಶುದ್ಧ ಬುದ್ಧ ಮುಕ್ತ ಸ್ವಭಾವದ ಅದ್ವೈತ ಬ್ರಹ್ಮಪರಮಾನಂದವೆಂದು ಅವನಿಗೇ ಅರಿವಾಗುವುದು. ಅದೇ ಮುಕ್ತಿಯು.

ಈವರೆಗಿನ ವಿಚಾರ ವಿವೇಚನೆಯ ಸಾರಾಂಶವೇನೆಂದರೆ - ಈಶ್ವರನು ಮಾಯೆಯಿಂದ ಪ್ರಪಂಚ ಸೃಷ್ಟಿ ಮಾಡಿರುವನು. ಅಂದಾಗ ಸೃಷ್ಟಿಯು ಮಾಯಿಕ = ಮಾಯಾಕೃತ = (ನಿದ್ರಾದೋಷದಿಂದುಂಟಾಗುವ ಕನಸಿನಂತೆ) ಆಗಮಾಪಾಯಿಯಾಗಿದೆ. ಕನಸಿನಂತೆ ಹುಸಿಯಾಗಿದೆ, ಪರಮಾರ್ಥ ಸತ್ಯವಲ್ಲ. ವ್ಯಾವಹಾರಿಕ ಸತ್ಯಮಾತ್ರವಾಗಿದೆ ಎಂದು ನಿಶ್ಚಯ ಮಾಡಿಕೊಳ್ಳಬೇಕು. ಸೃಷ್ಟಿಯು ಪರಮಾರ್ಥ ಸತ್ಯವೇ ಆಗಿದ್ದರೆ ಅದು ತತ್ತ್ವಜ್ಞಾನದಿಂದ ಇಲ್ಲದ್ದಾಗುವುದೇ ಇಲ್ಲ. ಏಕೆಂದರೆ ಜ್ಞಾನವು ಇರುವುದನ್ನು ಇಲ್ಲದ್ದನ್ನಾಗಿ ಮಾಡಲಾರದು. ಇಲ್ಲದ್ದನ್ನು ಹೊಸದಾಗಿ ಉಂಟುಮಾಡಲೂ ಆರದು. ಇರುವ ವಸ್ತುವನ್ನು ಇದ್ದಂತೆ ತಿಳಿಸುವುದೇ ಜ್ಞಾನಕ್ಕಿರುವ ಶಕ್ತಿ ಸ್ವಭಾವವಾಗಿದೆ. ಅಂದಾಗ ಸೃಷ್ಟಿ ಸತ್ಯ ಆಗಿದ್ದರೆ ತತ್ತ್ವಜ್ಞಾನದಿಂದ ಮನುಷ್ಯನಿಗೆ ಬ್ರಹ್ಮಕೈವಲ್ಯ = ಮೋಕ್ಷ ಆಗುವುದಿಲ್ಲೆಂದಾಗುವುದು. ಆದ್ದರಿಂದ ಸೃಷ್ಟಿಯು ಮಾಯಾಕೃತವೇ ಮಿಥ್ಯಾ ಎಂದೇ ಸಿದ್ಧಾಂತ. ಈ ಮಿಥ್ಯಾ ಪ್ರಪಂಚದಲ್ಲಿ ಜೀವಸಂಸಾರ-ವ್ಯವಹಾರ ನಡೆಯುತ್ತಿರುವುದು. ಈ ಸಂಸಾರಬಂಧನವನ್ನು ಬಿಡಿಸಿಕೊಳ್ಳುವುದು ಹೇಗೆಂದರೆ:

ಅಧ್ಯಾರೋಪಾಪವಾದಾಭ್ಯಾಂ ಜ್ಞಾತವ್ಯಸ್ತತ್ತ್ವ ನಿರ್ಣಯಃ।

ಆತ್ಮಸ್ವರೂಪಜ್ಞಾನವಿಲ್ಲದ ಮನುಷ್ಯಜೀವರು ತಮ್ಮ ಪೂರ್ವಕರ್ಮ ಫಲವಾಗಿ ಪ್ರಾಪ್ತವಾದ ಮಾಯಾಕೃತ ದೇಹಾದಿ ಕಾರ್ಯಕರಣಗಳಲ್ಲಿ ತನ್ನನ್ನು ಅಹಂ = ನಾನು, ಮಮ = ನನ್ನದು ಎಂದು ಮತ್ತು ತನ್ನಲ್ಲಿ ದೇಹೇಂದ್ರಿಯಗಳನ್ನು ಹೀಗೆ ಅನ್ಯೋನ್ಯಾರೋಪ ಮಾಡಿಕೊಂಡು ಅಭೇದವಾಗಿ ತಿಳಿದುಕೊಂಡಿರುವುದೇ ಅಭಿಮಾನಿಸಿ ಕೊಂಡಿರುವುದೇ ಸ್ವಾಭಾವಿಕವಾಗಿದೆ. ಇದೇ ಅಧ್ಯಾಸವು = ಅಧ್ಯಾರೋಪವು. ಇದು ನೈಸರ್ಗಿಕವಾಗಿದೆ. ಇದರಿಂದ ನಾನು ಎಂಬ ಅಹಂಕಾರವು ಉಂಟಾಗುವುದು. ಇದೇ ಅವಿದ್ಯೆಯು. ಪ್ರಮಾಣವಿಲ್ಲದೇ, ಪರೀಕ್ಷೆಯಿಲ್ಲದೇ, ಉದ್ದೇಶವಿಲ್ಲದೇ ಅವಿಚಾರಿತವಾಗಿ ಉಂಟಾಗಿರುವ ಈ ಬಗೆಯ ಅಧ್ಯಾಸವು ಮತ್ತು ನಾನು ಎಂಬ ಅಭಿಮಾನವು ಕನಸಿನಂತೆಯೇ ಹುಸಿ ಎಂದು ಅಜ್ಞಾನಿಗಳಿಗೆ ಗೊತ್ತಾಗುವುದಿಲ್ಲ. ಈ ಅಧ್ಯಾಸವು ಏಕೆ ಉಂಟಾಗುವುದೆಂದರೆ ಆತ್ಮ ಸ್ವರೂಪವನ್ನು ಅರಿಯದಿರುವುದೇ ಮತ್ತು ಆತ್ಮ ಅನಾತ್ಮರಲ್ಲಿರುವ ಭೇದವನ್ನು ಅರಿಯದಿರುವುದೇ ಮೂಲಾಜ್ಞಾನವು. ಇದೇ ಸಂಸಾರಕ್ಕೆ ಕಾರಣವಾಗಿದೆ. ಆದ್ದರಿಂದಲೇ ಮನುಷ್ಯರು ಮಿಥ್ಯಾಭಿಮಾನಕ್ಕೂ ಮತ್ತು ಮಾಯಾ ಮೋಹಕ್ಕೂ ಪಕ್ಕಾಗಿರುವರು. ಅಂದರೆ ಮಾಯಾ ಸೃಷ್ಟಿಯಾದ ನಾಮರೂಪಕರ್ಮಮಯ ದೇಹೇಂದ್ರಿಯಾದಿ ಪ್ರಪಂಚದಲ್ಲಿ ವಿಪರೀತ (ವ್ಯತ್ಯಸ್ತ) ಬುದ್ಧಿಯನ್ನು ತಾಳುತ್ತಾರೆ. ಇದೇ ಅವಿದ್ಯಾ ಕಾರ್ಯವು. ತಪ್ಪು ತಿಳಿಯುವುದೇ ಅವಿದ್ಯೆಯ ಸ್ವಭಾವ. ದೇಹಾದಿ ಜಗದ್ವಸ್ತುಗಳು ಮಾಯಾಕಾರ್ಯ ಮಿಥ್ಯೆ = ಅನೃತ ಜಡ ದುಃಖರೂಪವಾಗಿದ್ದರೂ ಅವನ್ನು ಸತ್ಯವೆಂದೂ, ಶಕ್ತಿಮಚ್ಚೇತನವೆಂದೂ, ಸುಖರೂಪವೆಂದೂ ತಿಳಿದುಕೊಳ್ಳುತ್ತಾರೆ ಮತ್ತು ಅಮೃತಸ್ವರೂಪನಾದ ಆತ್ಮನಲ್ಲಿ ನಾನು ಹುಟ್ಟಿದ್ದೇನೆ, ನಾನು ಮನುಷ್ಯ, ನನಗೆ ಇಂತಹ ಹೆಸರು, ನಾನು ಮರ್ತ್ಯ ಎಂದು [illegible] ಗೆ ಒಳಗಾಗಿರುತ್ತಾರೆ (ಇದೇ ಮೋಹ ನಿದ್ರೆ = ಸ್ಥಿರಸ್ವಪ್ನ). ಆದ್ದರಿಂದಲೇ ಮನುಷ್ಯರು ಹಸಿವು, ಬಾಯಾರಿಕೆ, ಜನ್ಮ, ಮರಣ, ಶೋಕ, ಭಯ, ಚಿಂತೆ ಇತ್ಯಾದಿ ಸಂಸಾರ ಕ್ಲೇಶಗಳನ್ನು ಅನುಭವಿಸುತ್ತಾರೆ. ಮಾಯಾವಶರೇ = ಪರತಂತ್ರರೇ ಆಗಿರುತ್ತಾರೆ. ಹೀಗೆ ಜೀವರು ಸಂಸಾರ ತಾಪತ್ರಯಕ್ಕೆ = ಬಂಧನಕ್ಕೆ

ಸಿಕ್ಕಿಕೊಂಡಿರುತ್ತಾರೆ. ಈಶ್ವರನಾದರೋ ನಿತ್ಯಸ್ವರೂಪಜ್ಞಾನವುಳ್ಳವನೇ ಆಗಿರುವುದರಿಂದ ಮಾಯೆಯು ಅವನಿಗೆ ಬಂಧವನ್ನುಂಟುಮಾಡಲಾರದು. ಅವನು ನಿತ್ಯ ಶುದ್ಧ ಬುದ್ಧ ಮುಕ್ತ ಸರ್ವಸ್ವತಂತ್ರನೇ ಅಮರನೇ ಆಗಿರುವನು.

ಈಶ್ವರೋಪಾಧಿಯಾದ ಮಾಯಾಶಕ್ತಿಯು (ಸತ್ತ್ವ ರಜಸ್ ತಮಸ್ ಅಪರಾಪ್ರಕೃತಿಯು) ತ್ರಿಗುಣಮಯವಾಗಿರುವುದರಿಂದ ಅದರ ಪ್ರಕಾರ = ಅಂಶಗಳು ಅನಂತವಾಗಿರುತ್ತವೆ. ಆ ಅಂಶಗಳೂ ತಮ್ಮ ಕಾರ್ಯಕರಣಸಾಮರ್ಥ್ಯದಲ್ಲಿ ಅನೇಕ ತಾರತಮ್ಯವುಳ್ಳವುಗಳಾಗಿರುತ್ತವೆ. ಇಂತಹ ವಿಶೇಷರೂಪದ ಉಪಾಧಿಯ ಚೇತನವನ್ನು ಕಾರ್ಯಬ್ರಹ್ಮ ಶಬಲಬ್ರಹ್ಮ ಎಂಬ ನಾಮರೂಪಗಳಿಂದ ನಿರ್ದೇಶಿಸುತ್ತಾರೆ. ಆದ್ದರಿಂದಲೇ ಲೋಕದಲ್ಲಿ ಶಿವ, ವಿಷ್ಣು, ದುರ್ಗಾ, ಗಣಪತಿ, ಲಕ್ಷ್ಮೀ, ಸರಸ್ವತೀ, ಕುಮಾರಸ್ವಾಮೀ, ಸೂರ್ಯಭಗವಾನ್ ಇತ್ಯಾದಿ ನಾನಾ ದೇವೀ ದೇವತೆಗಳ ವ್ಯವಹಾರವುಂಟಾಗಿರುತ್ತದೆ. ಕಾರಣಸಮಷ್ಟಿ = ಶಕ್ತಿರೂಪದ ಮಹಾಮಾಯಾ ಉಪಾಧಿಯ ಚೇತನವನ್ನು ಏಕೈಕ ಚೇತನ ಎಂದು ತಿಳಿಯಬೇಕು. (ಈಶ್ವರ-ಭಗವಾನ್ ಅಥವಾ ಭಗವತೀ ಇವೆಲ್ಲಾ ಒಂದೇ ಅರ್ಥ ಎಂದೇ ತಿಳಿಯಬೇಕು). ದೇವತಾಭೇದಗಳು ಕೇವಲ ಉಪಾಧಿಯಾದ ಶಕ್ತ್ಯಂಶಗಳ ಮೂಲಕವೇ = ವ್ಯಾವಹಾರಿಕವೇ ಹೊರತು, ಪರಮಾರ್ಥವಲ್ಲ. ಮೂಲಚೇತನನಲ್ಲಿ ಯಾವ ಭೇದವೂ ಇರುವುದಿಲ್ಲ. ಅದ್ವೈತಂ ಬ್ರಹ್ಮ ಎಂದೇ ವೇದದ ಉಪದೇಶವಿರುವುದು. ಭೇದವು ಪರಮಾರ್ಥವಲ್ಲ, ಎಲ್ಲರೂ ಈಶ್ವರರೇ. ಏಕರೀತಿ ಉಪಾಸ್ಯರೇ ಆಗಿರುತ್ತಾರೆ. ಭೇದವೆಣಿಸುವುದು ತಪ್ಪು ತಿಳಿವಳಿಕೆ. ಅಜ್ಞಾನವೇ, ಅದು ಮಹಾಪಾಪವೇ ಸರಿ.

ಇನ್ನು ಹೀಗೆಯೇ ಅಧ್ಯಾಸ = ಕಾರ್ಯ ಅವಿದ್ಯೋಪಾಧಿಯಿಂದ ವಿಶೇಷ ವ್ಯಷ್ಟಿರೂಪ = ದೇಹೇಂದ್ರಿಯಾದಿಗಳನ್ನು ಹೊಂದಿದ ಜೀವಚೇತನರ ಪರಿಸ್ಥಿತಿ ಏನೆಂದರೆ - ಅವರಿಗೆ ಸಂಸಾರೋದ್ಭವ ಮಾಡುವ ಅವಿದ್ಯಾ ಶಕ್ತಿಯೂ (ಅಂದರೆ ಅವಿದ್ಯಾಕೃತ ಕರ್ಮಶಕ್ತಿಯೂ) ಮತ್ತು ಅದರ ಅಂಶಗಳೂ ತ್ರಿಗುಣಮಯವಾಗಿರುವುದರಿಂದಲೇ ಅನಂತವಾಗಿರುತ್ತವೆ. ಅವುಗಳ ಸ್ವರೂಪ ಮತ್ತು ಕಾರ್ಯಕರಣಸಾಮರ್ಥ್ಯಗಳಲ್ಲೂ ಅನೇಕ ತಾರತಮ್ಯಗಳಿರುತ್ತವೆ. ಉಪಹಿತ ಚೇತನ ವಸ್ತುವಿನಲ್ಲಿ ಭೇದವೇನೂ

ಇರುವುದಿಲ್ಲ. ಆದರೆ ಉಪಾಧಿಯಾದ ವ್ಯಷ್ಟಿ ಪಂಚಕೋಶ = ಸೂಕ್ಷ್ಮ ಶರೀರ ಸ್ಥೂಲ ಶರೀರ ದೇಹ ಭೇದಗಳ ಮೂಲಕ ಪ್ರತಿಯೊಬ್ಬ ವ್ಯಕ್ತಿಯಲ್ಲೂ ಭೇದವು ಇರುವುದು. ಆದ್ದರಿಂದಲೇ ಲೋಕದಲ್ಲಿ ಮಹಾತ್ಮಾ, ದುರಾತ್ಮಾ, ಜ್ಞಾನೀ, ಅಜ್ಞಾನೀ, ಸುಗುಣ, ದುರ್ಗುಣ, ಸುಖೀ, ದುಃಖೀ, ಮೂಢ, ಚತುರ ಇತ್ಯಾದಿ ಭೇದಗಳೂ ಜಾಗ್ರತ್, ಸ್ವಪ್ನ, ಸುಷುಪ್ತಿ ಅವಸ್ಥೆಗಳೂ ಮತ್ತು ಸಾಂಸಾರಿಕ ಅನುಭವ - ವೇದನೆಗಳೂ ಬೇರೆ ಬೇರೆಯಾಗಿ ಇರುವುದು ಕಂಡುಬರುತ್ತಿರುವುದು. ಈ ಪುರುಷ, ಸ್ತ್ರೀ ಇತ್ಯಾದಿ ಭೇದಗಳೆಲ್ಲವೂ ಕೇವಲ ಉಪಾಧಿ (ಪಂಚಕೋಶ - ದೇಹತ್ರಯ) ಮೂಲಕವಾಗಿಯೇ ಆಗಿರುವುದರಿಂದ ಕೇವಲ ವ್ಯಾವಹಾರಿಕವಾಗಿರುತ್ತವೆ, ಪಾರಮಾರ್ಥಿಕ ಸತ್ಯವಾದವುಗಳಲ್ಲ. ವ್ಯಾವಹಾರಿಕ ಸತ್ಯಮಾತ್ರ. ಹೀಗೆಯೇ ಜೀವಾತ್ಮಾ ಪರಮಾತ್ಮಾ ಎಂಬ ಭೇದವೂ ಕೇವಲ ಉಪಾಧಿ ಭೇದದಿಂದಲೇ ಆಗಿರುವುದೆಂದು ತಿಳಿಯಬೇಕು. ಈ ನಿಜವು ತತ್ತ್ವವಿಚಾರ ಮಾಡಿಕೊಂಡಾಗಲೇ ಗೊತ್ತಾಗುವುದು, ಅನ್ಯಥಾ ತಿಳಿಯುವುದಿಲ್ಲ.

ಈವರೆಗಿನ ವಿಚಾರ ವಿವರಣೆಯಿಂದ ತತ್ತ್ವಜ್ಞಾನ ಮಾಡಿಕೊಳ್ಳದ ಮನುಷ್ಯಜೀವನ ದುಃಸ್ಥಿತಿಯನ್ನೂ ಸಂಸಾರಕ್ಲೇಶ ಪ್ರಸಂಗವನ್ನೂ ತಿಳಿಸಿದ್ದಾಯಿತು. ಇದೇ ಅಧ್ಯಾರೋಪವು. ಇದಕ್ಕೆ ಅಪವಾದವೇನೆಂದರೆ - ಅಶಬ್ದಂ ಅಸ್ಪರ್ಶಂ, ಅಕಾಯಂ ಅಸ್ನಾವಿರಂ, ನೇತಿನೇತ್ಯಾತ್ಮಾ ಇತ್ಯಾದಿಯಾಗಿ ಉಪನಿಷತ್ತುಗಳಲ್ಲಿ ಅಪವಾದ ಪ್ರಕ್ರಿಯೆಯಿಂದ ಅಪವಾದ ಶೇಷವಾಗಿ ಉಳಿಯುವ ಪರಮಾರ್ಥ ಸತ್ಯವಾದ ಆತ್ಮಸ್ವರೂಪವನ್ನು ಪ್ರತಿಪಾದಿಸಿದೆ. (ಆತ್ಮನು ಜಾತಿ, ಗುಣ, ಕ್ರಿಯಾ, ಧರ್ಮ, ಸಂಜ್ಞೆ ವಿಶೇಷವಿಲ್ಲದವನು ಸಾಕ್ಷೀ ಚೈತನ್ಯಮಾತ್ರ ಸ್ವರೂಪನು = ನಾಮರೂಪವಿಲ್ಲದವನು ಎಂದರ್ಥ). ಆತ್ಮಾ ಅನಾತ್ಮ ಸ್ವರೂಪಗಳನ್ನು ವಿವೇಚನೆ ಮಾಡಿಕೊಂಡರೆ ವಿವೇಕವಾದಾಗ ನಮಗೂ ತಿಳಿಯುತ್ತದೆ. ಅರಿಯುವ ಚೈತನ್ಯ ಸ್ವಭಾವದ ನಾನು ಜಡಸ್ವಭಾವದ ದೇಹವಲ್ಲ, ಇಂದ್ರಿಯ ಅಲ್ಲ, ಮನಸ್ಸು ಅಲ್ಲ, ಬುದ್ಧಿಯೂ ಅಲ್ಲ, ಪ್ರಾಣವೂ ಅಲ್ಲ, ಅಹಂಕಾರವೂ ನಾನಲ್ಲ. ಹೀಗೆ ನಿಷೇಧಶೇಷವಾಗಿ ಉಳಿಯುವ ತಾನು ಅವುಗಳ ಸಾಕ್ಷೀ ಚೇತನ ಮಾತ್ರ ನಾನು, ನಾಮರೂಪವಿಲ್ಲದ ಆತ್ಮನು. ಹೀಗೆಂಬ ನಿಶ್ಚಯ = ಅನುಭವವೇ ಅಪವಾದವು. ಆದ್ದರಿಂದ ಜೀವ ಆತ್ಮನು ಪರಮಾತ್ಮನೇ = ನಿತ್ಯ ಶುದ್ಧ ಬುದ್ಧ ಮುಕ್ತ ಸ್ವಭಾವನು

ಎಂದರಿಯಬೇಕು. ಈ ವಾಸ್ತವ ಸತ್ಯ ತತ್ತ್ವವನ್ನೇ ಶಾಸ್ತ್ರೋಪನಿಷತ್ತುಗಳು ತಿಳಿಸುತ್ತವೆ.

ಈ ಚಿಂತನೆಯ ಒಟ್ಟು ಸಾರಾಂಶವೇನೆಂದರೆ - ಚೇತನಾತ್ಮನು ಸುಷುಪ್ತಿ (ಅವಸ್ಥಾ ಕಾಲ) ಯಿಂದ (ಬುದ್ಧಿ ಪರಿಣಾಮ ನಿಮಿತ್ತ) ಜಾಗ್ರತ್ (ಅವಸ್ಥಾ ಕಾಲ) ಸ್ಥಿತಿಗೆ ಬಂದಂತೆ ಅಥವಾ ಸ್ವಪ್ನ (ಅವಸ್ಥಾ ಕಾಲ) ಸ್ಥಿತಿಗೆ ಬಂದಂತೆ ಸೃಷ್ಟಿ ಪ್ರಮೇಯ ಪ್ರಸಂಗವಾಗಿರುತ್ತದೆ. ಈ ಪ್ರಪಂಚದ ಪ್ರಾಣಿಗಳ ಅವಸ್ಥಾತ್ರಯದಲ್ಲಿ ಅನುಸ್ಯೂತನಾಗಿ ಏಕೈಕ ಆತ್ಮನೇ ಸಾಕ್ಷಿಯಾಗಿ ನಿತ್ಯವಾಗಿರುತ್ತಾನೆ. ಈ ಸಾಕ್ಷೀ ಚೈತನ್ಯನಲ್ಲೇ ಆತ್ಮಾಜ್ಞಾನದಿಂದ ಆಗಿರುವ ಅಧ್ಯಾಸ = ಅಧ್ಯಾರೋಪದಿಂದಲೇ ಸಮಷ್ಟಿ - ವ್ಯಷ್ಟಿ ರೂಪದ ಆತ್ಮ ಪ್ರಕೃತಿ ( ಮಾಯಾ ಅವಿದ್ಯಾ) ದ್ವಯ ಪರಿಣಾಮ ಉಪಾಧಿ ಮೂಲಕವಾಗಿ ಈಶ್ವರ, ಜೀವ, ಜಗತ್, ಭೋಕ್ತೃ, ಭೋಗ್ಯ, ಪ್ರೇರಕ ಇತ್ಯಾದಿ ವ್ಯವಹಾರವುಂಟಾಗಿರುವುದು. ಇದೇ ಮೋಹನಿದ್ರಾ ಸ್ಥಿತಿಯಾಗಿದೆ. ಈ ವಿಚಾರ ವಿವೇಕದಿಂದ ಈ ಪ್ರಪಂಚ ವ್ಯವಹಾರವೂ ಒಂದುಬಗೆಯ ಸ್ವಪ್ನವೇ (ಸ್ಥಿರ = ದೀರ್ಘಸ್ವಪ್ನ) ಎಂಬ ವಿಷಯವು ತಿಳಿಯುವುದು. ಮತ್ತು ಏಕಚೇತನನಲ್ಲೇ ಬದ್ಧ, ಮುಕ್ತ ಎಂಬ ವ್ಯವಸ್ಥೆಯು ಸಂಭವಿಸುತ್ತದೆ ಎಂದೂ ಮನವರಿಕೆಯಾಗುವುದು.

ವಿದ್ಯಾಯುಕ್ ಮುಕ್ತಃ। ಅವಿದ್ಯಾಯುಕ್ ಬದ್ಧಃ। (ಭಾಗವತ ೧೧-೧೧-೭)

ಪರಮಾರ್ಥ ಸತ್ಯವಸ್ತುಸ್ವರೂಪ ವಿವೇಕ, ನಿಶ್ಚಯವೇ ವಿದ್ಯೆಯು. ಅದಿಲ್ಲದಿರುವುದೇ ಅಜ್ಞಾನವು. ಆತ್ಮವಸ್ತುವನ್ನು ತಪ್ಪಾಗಿ ತಿಳಿದುಕೊಂಡಿರುವುದೇ ಅವಿದ್ಯೆಯು. ಅವಿದ್ಯೆಯಿಂದಿರುವವನೇ ಬದ್ಧನು. ಸ್ವಾತ್ಮಸ್ವರೂಪವನ್ನರಿತವನೇ = ಪರಮಾರ್ಥ ಸತ್ಯವಸ್ತು ವಿವೇಕ ಅನುಭವ ಮಾಡಿಕೊಂಡವನೇ ಮುಕ್ತನು. ಓಮ್.



## ಸ್ವಪ್ರಯತ್ನವಿಲ್ಲದೇ ಆತ್ಮನು ಸಿಕ್ಕುವುದಿಲ್ಲ

ಪ್ರತ್ಯಗಾತ್ಮನು ಮನುಷ್ಯನ ಮನೋಬುದ್ಧಿಗಳಲ್ಲಿ ನಾನು ನಾನು ಎಂದು ಸಾಮಾನ್ಯ ಜ್ಞಾನ (ಅಹಂಕಾರ) ರೂಪದಿಂದ ತೋರಿಕೊಳ್ಳುತ್ತಿರುತ್ತಾನೆ. (**೧. ಆತ್ಮಾಮೃತಸಮುದ್ರದಲ್ಲಿ ಸುಳಿಗುಳ್ಳೆಯಂತೆ ಎದ್ದುಕೊಂಡಿರುತ್ತಾನೆ. ೨. ಚಿದಾಕಾಶದಲ್ಲಿ ಹೊಳೆಯುವ ಮಿಂಚಿನಂತೆ, ೩. ಚಿದಗ್ನಿಕುಂಡದಿಂದ ಎದ್ದುಕೊಳ್ಳುವ**

ಕಿಡಿಯಂತೆ ೪. ಕನ್ನಡಿಯಂತಹ ಅಂತಃಕರಣದಲ್ಲಿ ಪ್ರತಿಬಿಂಬದಂತೆ ತೋರಿಕೊಳ್ಳುತ್ತಿರುತ್ತಾನೆ) ಆತ್ಮಾ ಎಂದು ತನ್ನ (ವಿಶೇಷ) ಸಹಜ ರೂಪದಿಂದ ತೋರಿಕೊಳ್ಳುತ್ತಿರುವುದಿಲ್ಲ. ಏಕೆಂದರೆ ಮನ ಆದಿಗಳು ಅನ್ನಮಯ = ಭೌತಿಕಗಳಾಗಿರುತ್ತವೆ. ಸಾಕ್ಷಾದಾತ್ಮನನ್ನು ಪ್ರಕಾಶಿಸುವ ಸಾಮರ್ಥ್ಯವು ಅವಕ್ಕಿರುವುದಿಲ್ಲ. ಆತ್ಮನು ತನ್ನ ವಿಶೇಷರೂಪದಿಂದ ಅಂದರೆ ಸ್ವಜ್ಞಾನ ಪ್ರಕಾಶದಿಂದ ತಾನೇ ಪ್ರಕಾಶಿಸಬೇಕು. ಅದೇ ಪುರುಷಾರ್ಥವಾಗುವುದು. ಸೂರ್ಯ, ದೀಪ ಇವು ಸ್ವಯಂ ಪ್ರಕಾಶ ವಸ್ತು ಎಂದು ತಿಳಿದಿರುವುದಷ್ಟೆ. ಹಾಗೆಯೇ ಆತ್ಮನೂ ಸ್ವಯಂಜ್ಯೋತಿಯಾಗಿರುವನು. ದೀಪವು ತೋರಲು ಬೇರೆ ದೀಪದ ಆವಶ್ಯಕತೆ ಇಲ್ಲ. ಅದೇ ದೀಪದ ಬೆಳಕೂ ದೀಪವನ್ನು ಪ್ರಕಾಶಪಡಿಸುತ್ತಿರುವುದಿಲ್ಲ. ಸೂರ್ಯನ ಕಿರಣ ಪ್ರಭೆಯೂ ಸೂರ್ಯನು ಬೆಳಗಲು ಸಹಾಯ ಉಪಕಾರ ಮಾಡಲಾರದು. ಹಾಗೆಯೇ ಮನ ಆದಿ ಜ್ಞಾನೇಂದ್ರಿಯಗಳು ಮತ್ತು ಮಾತು ಮೊದಲಾದ ಪ್ರಮಾಣಗಳೂ ಆತ್ಮನನ್ನು ವಿಷಯೀಕರಿಸಲಾರವು = ಪ್ರಕಾಶಪಡಿಸಲಾರವು. ಆದ್ದರಿಂದಲೇ ಆತ್ಮನು ಅಪ್ರಮೇಯ = ಪ್ರಮಾಣ ಪರಿಚ್ಛಿನ್ನನಲ್ಲ. ಆತ್ಮನು ಸ್ವಯಂಪ್ರಕಾಶನೇ. ಸ್ವಾನುಭವ ಸ್ವಯಂಸಿದ್ಧನೇ.

ಮೋಡ, ಮಂಜು, ಹೊಗೆ ಮೊದಲಾದ ಪ್ರತಿಬಂಧಕವೇನೂ ಇಲ್ಲದಿದ್ದರೆ ಸೂರ್ಯನು ತಾನೇ ಪ್ರಕಾಶಿಸುವನು. ದೀಪವು ತೋರಬೇಕಾದರೆ ಮುಸುಕು, ಮರೆ ಇರಕೂಡದು. ಹಾಗೆಯೇ ಆತ್ಮನು ಪ್ರಕಾಶಿಸಬೇಕಾದರೆ ಮುಸುಕು ಆವರಣ ತಪ್ಪಬೇಕು. ೧. ಅಜ್ಞಾನ = ಅವಿದ್ಯೆ, ೨. ನಾನು ಎಂಬ (ಅಹಂಕಾರ) ಸಾಮಾನ್ಯ ಜ್ಞಾನ. ೩. ದೇಹೇಂದ್ರಿಯಗಳು. ೪. ಪ್ರಾಪಂಚಿಕ ವಸ್ತುಗಳ ವಿಶೇಷ ಜ್ಞಾನಗಳು ಇವು ನಿರ್ವಿಶೇಷ ಜ್ಞಾನಾತ್ಮನಿಗೆ ಮುಸುಕು ಮರೆಯಾಗಿರುತ್ತವೆ, ಆವರಣವಾಗಿರುತ್ತವೆ. ಈ ಆವರಣಗಳು ತಪ್ಪಿದರೆ ಆತ್ಮನು ತಾನೇ ಪ್ರಕಾಶಿಸುವನು. ಆ ಮುಸುಕು ತಪ್ಪುವುದು ಹೇಗೆಂದರೆ ಅಧ್ಯಾಸದಿಂದಿರುವ ಮನುಷ್ಯನು ತಾನೇ ನಾನು ಯಾರು ? ನನ್ನ ಸ್ವರೂಪವೇನು ? ಸ್ವಭಾವವೇನು ? ಎಂದು ಜಿಜ್ಞಾಸೆ ಪರೀಕ್ಷೆ, ವಿವೇಚನೆ, ವಿಚಾರ ಮಾಡುತ್ತಾ ವಿವೇಕ ನಿಶ್ಚಯ ಜ್ಞಾನ ಮಾಡಿಕೊಳ್ಳುತ್ತಾ ಇದ್ದರೆ ಈ ಸ್ವಾನುಭವ ಕ್ರಮದಿಂದಲೇ ಅಂದರೆ :- ಜ್ಞಾನ ಶಕ್ತಿಯುಳ್ಳ ನಾನು ಚಿದ್ರೂಪ ಆತ್ಮನು. ಜಡ ಸ್ವರೂಪದ ದೇಹೇಂದ್ರಿಯ ಪ್ರಾಣಗಳೇ ಬೇರೆ. ಅವು ನಾನಲ್ಲ. ಮನೋಬುದ್ಧಿ

ಅಹಂಕಾರಗಳೂ ನಾನಲ್ಲ(ಇದೇ ಅಪವಾದ). ನಾನು ಚೇತನಾತ್ಮಾ ಹೀಗೆಂದು ವಿವೇಚನೆ ವಿವೇಕದಿಂದ ನಿಶ್ಚಯವಮಾಡಿಕೊಳ್ಳುತ್ತಾ ಬಂದಾಗ ದೇಹೇಂದ್ರಿಯಾದಿ ನಾಮ ರೂಪಗಳೆಲ್ಲವೂ ಮಾಯಿಕ = ಜಡ = ಮಿಥ್ಯಾ ಎಂದು ಅವನ್ನು ನಿರಾಕರಿಸಿಕೊಂಡು, ಎಲ್ಲವನ್ನೂ ಅರಿಯುವ ನಾನು ಇರುವುದು ಸತ್ಯ ಪರಮಾರ್ಥ ಎಂದು ನಿರ್ಣಯ ಮಾಡಿಕೊಳ್ಳಲು ನಿರಾಕರಿಸಿಕೊಳ್ಳುವ ಈ ಅರಿವಿನ ಸ್ವಭಾವದ ಮನುಷ್ಯನು ತಾನೇ ಆತ್ಮನು ಉಳಿದುಕೊಳ್ಳುವನು. ಹೀಗೆಂಬುದು ಆ ಮನುಷ್ಯನಿಗೇ ತಿಳಿಯುವುದು. ಹೀಗೆ ಸ್ವಾನುಭವದಿಂದ (ಮನೋಬುದ್ಧಿಗಳಿಂದಲ್ಲ) ತಾನು ವಿಶೇಷಾಪೋಹ ಮಾಡಿಕೊಂಡು ನಿಶೇಧಶೇಷವಾಗಿ ಉಳಿದುಕೊಳ್ಳುವುದೇ ಹಾಗೆಂದು ನಿಶ್ಚಯ ಅನುಭವ ಮಾಡಿಕೊಳ್ಳುವುದೇ ಆತ್ಮನ ಸ್ವಯಂಪ್ರಕಾಶವಾಗಿರುತ್ತದೆ. ಇದೇ ಸ್ವಾನುಭವದ ಆತ್ಮ ಸಿದ್ಧಿಯು. ಸ್ವಾತ್ಮದರ್ಶನವಾಗಿರುತ್ತದೆ.

(ಈ ಅಧ್ಯಾತ್ಮ ವಿದ್ಯಾಭ್ಯಾಸಕ್ಕೆ = ವಿಚಾರ, ಪಠನ, ಶ್ರವಣ, ಮನನಕ್ಕೆ ಫಲಶ್ರುತಿ)

ಸ್ನಾತಂ ತೇನ ಸಮಸ್ತತೀರ್ಥಸಲಿಲೇ ಸರ್ವಾಪಿ ದತ್ತಾsವನಿಃ
ಯಜ್ಞಾನಾಂಚ ಸಹಸ್ರಮಿಷ್ಟಮಖಿಲಾ ದೇವಾಶ್ಚ ಸಂಪೂಜಿತಾಃ।
ಸಂಸಾರಾಚ್ಚ ಸಮುದ್ಧೃತಾಃ ಸ್ವಪಿತರಸ್ತ್ರೈಲೋಕ್ಯಪೂಜ್ಯೋsಪ್ಯಸೌ
ಯಸ್ಯ ಬ್ರಹ್ಮವಿಚಾರಣೇ ಕ್ಷಣಮಪಿ ಸ್ಥೈರ್ಯಂ ಮನಃ ಪ್ರಾಪ್ನುಯಾತ್ ॥

ವೇದಾನ್ತಾಭಿಯುಕ್ತವಚನಮ್

ಈ ಭಗವತ್ ಚಿಂತನೆಯಲ್ಲಿ, ಆತ್ಮ ವಿಚಾರದಲ್ಲಿ ಯಾವ ಮನುಷ್ಯನ ಮನೋಬುದ್ಧಿಗಳು ಒಂದುಕ್ಷಣ ಸ್ಥಿರವಾಗಿ ನಿಲ್ಲುವುವೋ, ಆಗ ಅವನು ಅದಕ್ಕಿಂತ ಹೆಚ್ಚಿನ ಬೇರೆ ಮಾಡಬೇಕಾದ ಶುಭಕೃತ್ಯ ಯಾವುದೂ ಉಳಿದಿರುವುದಿಲ್ಲ. ಅಷ್ಟುಮಾತ್ರದಿಂದಲೇ ಅವನು ಸಮಸ್ತ ಪುಣ್ಯತೀರ್ಥಗಳಲ್ಲಿ ಸ್ನಾನಮಾಡಿದ್ದಾಗುವುದು. ಸಮುದ್ರಪರ್ಯಂತ ಭೂಮಿಯನ್ನು ದಾನಮಾಡಿದ್ದಾಗುವುದು. ಸಾವಿರ ಯಜ್ಞಗಳನ್ನು ಮಾಡಿದಂತಾಗುವುದು. ಸಮಸ್ತ ದೇವತೆಗಳನ್ನು ವಿಧ್ಯುಕ್ತ ಪೂಜಿಸಿದ್ದಾಗುವುದು ಆರಾಧಿಸಿದಂತಾಗುವುದು. ಅವನು ತನ್ನ ಪೂರ್ವಪಿತೃಗಳನ್ನೆಲ್ಲಾ ಸಂಸಾರದಿಂದ ಉದ್ಧಾರಮಾಡಿದವನಾಗುವನು. ಹೆಚ್ಚು ಹೇಳುವುದೇನು ಇಂತಹ ಭಗವದ್ ಭಕ್ತನು ಮೂರು ಲೋಕಕ್ಕೂ ಪೂಜ್ಯನು ಎನಿಸುವನು (ಎಂದು ಶ್ಲೋಕಾರ್ಥ). ಆದ್ದರಿಂದ ಮನುಷ್ಯನ ಶ್ರೇಯಸ್ಸಾಧನೆಗಳಲ್ಲಿ ಎಲ್ಲಾ

— ಯೋಗಗಳಿಗಿಂತಲೂ ವಿದ್ಯಾಪ್ರಸ್ಥಾನವಾದ ಈ ಜ್ಞಾನಯೋಗವೇ ಮೇಲಾದುದು ಎಂದು ನಿಶ್ಚಯವಾಗುವುದು. ಆದ್ದರಿಂದ ಬುದ್ಧಿವಂತನು ಈ ಅಧ್ಯಾತ್ಮ ವಿದ್ಯಾಭ್ಯಾಸವನ್ನೇ ಮಾಡಬೇಕು. ನಾನ್ಯಃ ಪಂಥಾ ವಿದ್ಯತೇಽಯನಾಯ (ಶ್ರುತಿವಾಕ್ಯ) ಮೋಕ್ಷಕ್ಕೆ ಬೇರೆ ದಾರಿ ಇಲ್ಲ

ಇಜ್ಯಾಚಾರ ದಯಾಹಿಂಸಾ ದಾನ ಸ್ವಾಧ್ಯಾಯ ಕರ್ಮಣಾಂ।

ಅಯಂತು ಪರಮೋಧರ್ಮೋ ಯದ್ಯೋಗೇನಾತ್ಮದರ್ಶನಂ (ಸ್ಮೃತಿವಚನ)

ಅಧ್ಯಾತ್ಮ ವಿದ್ಯಾಯೋಗದಿಂದ ಸ್ವಾತ್ಮನನ್ನು ತಿಳಿದುಕೊಳ್ಳುವುದೇ ಮೇಲಾದ ಧರ್ಮವು. ಯಜ್ಞ, ಯಾಗ, ಸದಾಚಾರ, ಪ್ರಾಣಿದಯೆ, ಅಹಿಂಸೆ, ದಾನ, ವೇದಾಧ್ಯಯನ ಈ ಪುಣ್ಯ ಕರ್ಮಗಳಿಗಿಂತಲೂ ಮೇಲಾದ ಧರ್ಮವಾಗಿರುತ್ತದೆ.

ಆತ್ಮಪ್ರಯತ್ನಸಾಪೇಕ್ಷಾ ವಿಶಿಷ್ಟಾ ಯಾ ಮನೋಗತಿಃ।
ತಸ್ಯಾಬ್ರಹ್ಮಣಿ ಸಂಯೋಗೋ ಯೋಗ ಇತ್ಯಭಿಧೀಯತೇ॥ ವಿ.ಪು.

ಆತ್ಮ ಅನಾತ್ಮ ವಿವೇಚನೆಯೇ ಯೋಗವಾಗಿರುತ್ತದೆ.

ಅಶ್ರದ್ದಧಾನಾಃ ಪುರುಷಾ ಧರ್ಮಸ್ಯಾಸ್ಯ ಪರಂತಪ।
ಅಪ್ರಾಪ್ಯ ಮಾಂ ನಿವರ್ತಂತೇ ಮೃತ್ಯುಸಂಸಾರವರ್ತ್ಮನಿ॥ ಗೀತಾ ೯-೩.

ಎಲೈ ಅರ್ಜುನ, ಇಂತಹ ಶ್ರೇಷ್ಠ ಧರ್ಮದಲ್ಲಿ ಮನುಷ್ಯರು ನಂಬಿಕೆ ಶ್ರದ್ಧೆಯಿಲ್ಲದೆ ಅಭ್ಯಾಸ ಮಾಡದೇ ನನ್ನ ಪರಂಧಾಮವನ್ನು ಪಡೆಯದೇ ಮುಪ್ಪು ಮರಣಾದಿ ಭಯ ದುಃಖಮಯವಾದ ಸಂಸಾರ ಸರಣಿಯಲ್ಲೇ ಭ್ರಮಿಸಿಕೊಂಡಿರುತ್ತಾರೆ.

ಚಿಕಿತ್ಸಾರಹಿತೋರೋಗೋ ಮಾನವಂಬಾಧತೇ ಯಥಾ।
ಅಪ್ರಬೋಧಸ್ತಥಾ ವಿದ್ವಾನ್ಸ್ವಪ್ನದೋಷಃ ಪ್ರಬಾಧತೇ॥

★★★★★

ಆಶಾಂ ಛಿಂಧಿ ವಿಷೋಪಮೇಷು ವಿಷಯೇಷ್ವೇಷೈವ ಮೃತ್ಯೋಃ ಸೃತಿಃ
ತ್ಯಕ್ತ್ವಾ ಜಾತಿ ಕುಲಾಶ್ರಮೇಷ್ವಭಿಮತಿಂ ಮುಂಚಾತಿದೂರಾತ್ಕ್ರಿಯಾಃ।
ದೇಹಾದಾವಸತಿ ತ್ಯಜಾತ್ಮಧಿಷಣಾಂ ಪ್ರಜ್ಞಾಂ ಕುರುಷ್ವಾತ್ಮನಿ
ತ್ವಂ ದ್ರಷ್ಟಾಸ್ಯಮಲೋಽಸಿ ನಿರ್ದ್ವಯಂ ಪರಬ್ರಹ್ಮಾಸಿ ಯದ್ವಸ್ತುತಃ॥

ಸದಸದ್ವಿಲಕ್ಷಣಾ = ಮಾಯೆ.
ಸದಸತ್ಪರ = ಬ್ರಹ್ಮ = ಆತ್ಮ

ಕಟುಕೌಷಧವ ಜ್ಞಾನಮವಿದ್ಯಾ ವ್ಯಾಧಿನಾಶನಂ।
ವಾಕ್ಯಂ ಚೈಕ ಮಹೋಕ್ತ್ಯಂ ವಿವೇಕ ಗದಾಧರಂ॥
ಮಹೋಕ್ತಿ

॥ ಶ್ರೀ ಗಣೇಶ ಶಾರದಾ ಗುರುಭ್ಯೋನಮಃ ॥

ಅಖಂಡಂ ಸಚ್ಚಿದಾನಂದಮವಾಙ್ಮಾನಸಗೋಚರಂ।

ಆತ್ಮಾನಮಖಿಲಾಧಾರಮಾಶ್ರಯೇಽಭೀಷ್ಟಸಿದ್ಧಯೇ ॥ ಶ್ರೀಃ ॥

## ಸ್ವಾತ್ಮದರ್ಶನ ಎಂಬ ಪರಮಾರ್ಥ ಸತ್ಯಾನುಭವಕ್ಕೆ ಪಂಚಾಮೃತ ವಾಕ್ಯ ಉಪನ್ಯಾಸ = ಅನುಶಾಸನ

೧. ಅಹಮ್ ಅಸ್ಮಿ = ನಾನು ಇದ್ದೇನೆ

೨. ಅಹಮ್ ಆತ್ಮಾ = ನಾನು ಆತ್ಮನು

೩.. ಅಯಮಾತ್ಮಾ ಬ್ರಹ್ಮ = ಈ ಆತ್ಮನು ಬ್ರಹ್ಮವೇ (ಪರಮಾತ್ಮನೇ)

೪. ಸರ್ವಂ ಖಲ್ವಿದಂ ಬ್ರಹ್ಮ = ಇದು ಎಲ್ಲವೂ ಬ್ರಹ್ಮವೇ ಆಗಿದೆ

೫. ಅಹಂ ಬ್ರಹ್ಮಾಸ್ಮಿ = ನಾನು ಬ್ರಹ್ಮವೇ ಆಗಿದ್ದೇನೆ.

ಈ ಐದು ವಾಕ್ಯಗಳ ಗಂಭೀರವಾದ ತಾತ್ಪರ್ಯಾರ್ಥವನ್ನು ಕೂಲಂಕಷ ವಿಚಾರಪೂರ್ವಕ ತಿಳಿದು ಪ್ರತಿಯೊಂದನ್ನೂ ಮನನದಿಂದ ದೃಢ ನಿಶ್ಚಯ ಮಾಡಿಕೊಂಡರೆ, ತಾನು ಮರ್ತ್ಯನೆಂದುಕೊಂಡಿರುವ ಮನುಷ್ಯನಿಗೆ ತನ್ನ ತಪ್ಪು ತಿಳಿವಿನ ಅರಿವಾಗುವುದಲ್ಲದೆ, ಅವನು ತನ್ನ ಅವಿದ್ಯಾಮೋಹ ನಿದ್ರೆಯಿಂದ ಎಚ್ಚತ್ತುಕೊಂಡು, (ಈ ಜಗದ್ ವ್ಯವಹಾರವೆಂಬ ಸ್ಥಿರ ಸ್ವಪ್ನವನ್ನು ಇಲ್ಲವಾಗಿಸಿಕೊಂಡು) ತಾನು ಚಿನ್ಮಯ ಆತ್ಮನು = ನಿಜದಲ್ಲಿ ನಿತ್ಯ ಶುದ್ಧ ಬುದ್ಧ ಮುಕ್ತ ಬ್ರಹ್ಮವೇ ಎಂದು ಸ್ವಾನುಭವದಿಂದಲೇ ಗೊತ್ತುಮಾಡಿಕೊಳ್ಳುವನು. ಈ ಪರಮಾರ್ಥ ಸತ್ಯಾತ್ಮ ಜ್ಞಾನದಿಂದ ಪರಮ ಪುರುಷಾರ್ಥವನ್ನೇ ಪಡೆದು ಕೃತಕೃತ್ಯನೂ, ಧನ್ಯನೂ, ಅಮೃತನೂ ಆಗುವನು. ಅಂದರೆ ಸಂಸಾರಬಂಧನದಿಂದ ಮುಕ್ತಿ ಪಡೆಯುವನು. ಅವನಿಗೆ ಪುನಃ ಜನ್ಮವಿಲ್ಲ. ಈ ವಿಷಯ ವಿಚಾರವಂತಿರುವುದು –

೧. ಅಹಮ್ ಅಸ್ಮಿ – ನಾನು ಇದ್ದೇನೆ. ನಾನು ಇದ್ದೇನೆಂಬ ಅರಿವು ಎಲ್ಲರಿಗೂ ಇದ್ದೇ ಇರುವುದಷ್ಟೆ. ಮನುಷ್ಯನಿಗೆ ತಾನು ಇರುವ ಜ್ಞಾನವು ಸ್ವಾಭಾವಿಕವಾಗಿದೆ. ಈ ಜ್ಞಾನವು ಅನುಭವ ರೂಪವಾಗಿರುವುದರಿಂದ ನಿಶ್ಚಯ ಜ್ಞಾನವೇ ಆಗಿರುತ್ತದೆ. ಸಂಶಯವಲ್ಲ. ಈ ಅರಿವು ಸ್ವಾಭಾವಿಕವಾದರೂ ಸ್ವಪ್ನದಂತೆ

ಭ್ರಾಂತಿಯಲ್ಲ. ಕೇವಲ ಮಿಥ್ಯೆಯೂ ಅಲ್ಲ. ಏಕೆಂದರೆ ಎಚ್ಚರ, ಸ್ವಪ್ನ, ನಿದ್ದೆ ಈ ಮೂರು ಅವಸ್ಥೆಗಳಲ್ಲೂ ತಾನು ಇರುವುದು ಖಚಿತವಾಗಿರುತ್ತದೆ. (ಇದು ಸ್ವಯಮಾತ್ಮಾ ಎಂಬ ಸತ್ಯಾಮೃತ ಸಿಂಧುವಿನಲ್ಲಿ ಗುಳ್ಳೆಯಂತೆ, ಮನುಷ್ಯನ ಅಂತಃಕರಣದಲ್ಲಿ ಈ ನಾನು ಎಂಬುದು ಚಿದಗ್ನಿಕುಂಡದಿಂದ ಹೊರಹೊಮ್ಮುವ ಕಿಡಿಕಿರಣದಂತೆ ಈ ನಾನು ಎಂಬ ಅರಿವು ತನ್ನಷ್ಟಕ್ಕೆ ತಾನೇ ಮೇಲಕ್ಕೆದ್ದು ಕೊಂಡಿರುವುದರಿಂದ ಅರ್ಧ ಸತ್ಯ, ಅರ್ಧ ಮಿಥ್ಯ = ಸತ್ಯಾನೃತ ರೂಪ (ನಾನು ಎಂಬುದು ಅನುಭವ ಮಾತ್ರವಾದರೆ ಸತ್ಯ = ಇದು ಸದಾ ಇರುವುದು. ನಾನು ಎಂಬುದು ದೇಹ ಅಹಂಕಾರ ರೂಪವಾದರೆ ಇದು ಅನೃತ ನಿದ್ದೆಯಲ್ಲಿ ಇರುವುದಿಲ್ಲ = ಮಿಥ್ಯೆ ಎಂದು ವಿಚಾರಮಾಡಿಕೊಂಡಾಗ ಗೊತ್ತಾಗುವುದು). ಯಾವನಾದರೊಬ್ಬನು ನಾನುಇಲ್ಲ ಎಂದು ತಿಳಿದರೆ ಹಾಗೆ ತಿಳಿದವನು ತಾನು ಇರುತ್ತಾನೆ. ಇದ್ದೇನೆಯೋ ಇಲ್ಲವೋ ಎಂದು ಸಂಶಯ ಪಟ್ಟರೆ ಹಾಗೆ ಸಂಶಯಗೊಂಡವನು ತಾನು ಇದ್ದೇ ಇರುತ್ತಾನೆ. ನಿಜಾನುಭವಸ್ವರೂಪದ ತನ್ನನ್ನು , ತಾನಿರುವುದನ್ನು ನಿರಾಕರಿಸಲಾಗಲೀ ಹೊಸದಾಗಿ ಸಂಪಾದಿಸುವುದಕ್ಕಾಗಲಿ ಯಾರಿಗೂ ಎಂದಿಗೂ ಶಕ್ಯವಿಲ್ಲ. ನಾನಿದ್ದೇನೆಂಬ ನಿತ್ಯಾನುಭವವು ಮನುಷ್ಯಾದಿ ಸಕಲ ಪ್ರಾಣಿಗಳಿಗೂ ಸದಾ ಇದ್ದೇ ಇರುವುದು. ದೇಶ ಕಾಲಗಳು ಬದಲಾಗಬಹುದು. ಜಾಗರ ಆದಿ - ಬಾಲ್ಯ ಆದಿ ಅವಸ್ಥೆಗಳು ವ್ಯತ್ಯಾಸ ಹೊಂದಬಹುದು. ಆದಾಗ್ಯೂ ತಾನಿರುವ ಅರಿವು ತಪ್ಪುವುದಿಲ್ಲ. ತಾನಿರುವ ಜ್ಞಾನವು ದೃಢವಾಗಿರುವುದರಿಂದಲೇ ಜನರು ತಮಗೆ ಬೇಕಾದುದನ್ನು ಹೊಸದಾಗಿ ಸಂಪಾದಿಸುತ್ತಲೂ ಬೇಡದುದನ್ನು ದೂರ ಮಾಡಿಕೊಳ್ಳುತ್ತಲೂ ಇರುತ್ತಾರೆ. ಈ ನಾನು ಇದ್ದೇನೆಂಬ ಅರಿವಿಗೆ ಪ್ರಮಾಣವೇನೂ ಬೇಕಾಗಿರುವುದಿಲ್ಲ. ಪ್ರಮಾಣ ಇಲ್ಲವೂ ಇಲ್ಲ. ಅದಕ್ಕೆ ನಾನಿದ್ದೇನೆಂಬ ಅನುಭವವೇ ಪ್ರಮಾಣ. ಅಂದರೆ ಸ್ವಯಂ ಪ್ರಮಾಣವು = ಸ್ವಯಂಪ್ರಕಾಶವೇ. ಈ ಅನುಭವವು ಇಂದ್ರಿಯ ಮೂಲಕ ಉಂಟಾಗುವುದಿಲ್ಲ. ಆದ್ದರಿಂದ ಇದನ್ನು ಪ್ರತ್ಯಕ್ಷ ಎನ್ನುವಂತಿಲ್ಲ. ತನಗೆ ತಾನು ದೂರವಲ್ಲದ್ದರಿಂದ, ವಿಷಯವೂ ಅಲ್ಲದ್ದರಿಂದ ಈ ಜ್ಞಾನವು ಪರೋಕ್ಷ ಜ್ಞಾನವೂ ಆಗಿರುವುದಿಲ್ಲ. ಅಂದಾಗ ನಾನಿದ್ದೇನೆಂಬ ಅನುಭವವನ್ನು ಸ್ವಯಂಪ್ರಕಾಶ, ಅಪರೋಕ್ಷ = ಸ್ವಯಂಸಿದ್ಧ ಎಂದೇ ಒಪ್ಪಬೇಕು. ನಾನು ಇದ್ದೇನೆಂಬ ಜ್ಞಾನಕ್ಕೆ ದೇಶ ಕಾಲಗಳ ಸಂಬಂಧವಾಗಲೀ, ಮನ ಆದಿ

ಕಾರಕಕ್ರಿಯೆಗಳ ಅಪೇಕ್ಷೆಯಾಗಲೀ ಇರುವುದಿಲ್ಲ. ತಾನು ಇರುವ ಜ್ಞಾನವು ನಿರಪೇಕ್ಷವಾಗಿರುವುದರಿಂದಲೂ, ಸ್ವಯಂ ಪ್ರಮಾಣ, ಸ್ವಯಂ ಸಿದ್ಧವಾಗಿರುವುದರಿಂದಲೂ ಈ ಇರುವು = ಅರಿವು (ಇರುವು ಎಂಬ ಅರಿವು ಅರಿವು ಎಂಬ ಇರುವು ಇವು ಬೇರೆಬೇರೆ ಅಲ್ಲ) ಕ್ರಿಯಾರೂಪವಾದುದಲ್ಲ. ವಸ್ತುರೂಪವೇ ಪರಮಾರ್ಥ ಸತ್ಯವೇ ಆಗಿರುತ್ತದೆ. ದೇಹಾದಿ ಜಗತ್ಪದಾರ್ಥಗಳು ಬೇರೆ ಬೇರೆ ಅವಸ್ಥೆಗಳಲ್ಲಿ ಬಾಧೆಹೊಂದುವಂತೆ ಈ ಅನುಭವವು ಬಾಧಿತವಾಗುವುದಿಲ್ಲ. ಇಲ್ಲದ್ದಾಗುವುದಿಲ್ಲ. ಜಾಗರಾದಿ ಮೂರು ಅವಸ್ಥೆಗಳಲ್ಲೂ ಅರಿವಿನ ಸ್ವಭಾವದ ತಾನು ಇರುವುದು ಬಾಧೆಯಿಲ್ಲದ್ದಾದ್ದರಿಂದ ನಿತ್ಯವೂ ಸತ್ಯವೂ ಆಗಿರುತ್ತದೆ ಎಂದು ನಿಶ್ಚಯಮಾಡಿಕೊಳ್ಳಬೇಕು. ಈಗ ಇಲ್ಲಿ ನಾನು ಇರುವುದಕ್ಕೆ ದೇಶ ಕಾಲಗಳ ಸಂಬಂಧ ಇರುವಂತೆ ಕಂಡರೂ ಅದು ನಿಜವಲ್ಲ. ಏಕೆಂದರೆ - ಈ ಎಚ್ಚರದ ದೇಶ ಕಾಲಗಳೇ ಬೇರೆ. ಕನಸಿನ ದೇಶಕಾಲಗಳೇ ಬೇರೆ ಆಗಿರುತ್ತವೆ. ಸುಷುಪ್ತಿಯಲ್ಲಿ ದೇಶ ಕಾಲಗಳಿಗೆ ಸ್ಥಿತಿಯೇ ಇರುವುದಿಲ್ಲ. ಆ ಎಲ್ಲಾ ಅವಸ್ಥೆಗಳಲ್ಲೂ ತಾನಿರುವುದು ಖಚಿತವಾಗಿರುತ್ತದೆ. (ದೇಶ ಕಾಲಗಳಿಗೆ ಒಂದು ನಿಶ್ಚಿತವಾದ ಸ್ಥಿತಿಯೇ ಇರುವುದಿಲ್ಲ. ಆದ್ದರಿಂದ ಅವು ಮಿಥ್ಯೆ) ಮರಣವು ಆತ್ಮನ ಗಾಢವಿಸ್ಮೃತಿಯೇ ಆತ್ಮನಿಲ್ಲದ ಅವಸ್ಥೆಯಲ್ಲ. ಇದರಿಂದ ತಿಳಿಯುವುದೇನೆಂದರೆ - ನಮ್ಮ ಅವಸ್ಥೆಯಲ್ಲಿ ದೇಶ ಕಾಲಗಳು ಇರತಕ್ಕವು. ದೇಶಕಾಲಗಳಲ್ಲಿ ನಾವು ಇರುವೆವೆಂದು ತಿಳಿಯುವುದು ತಪ್ಪು ತಿಳಿವಳಿಕೆಯಾಗಿರುತ್ತದೆ. ಅದು ಅಜ್ಞಾನವೇ. ನಿದ್ರಾಸ್ಥಿತಿಯಲ್ಲಿ ದೇಹಾದಿ ದೇಶ ಕಾಲ ವಸ್ತು ಒಂದೂ ಇರುವುದೇ ಇಲ್ಲ. ತಾನು ಏಕಮಾತ್ರ ಇರುವುದು ನಿಶ್ಚಯ. ಈ ಅನುಭವ ಪ್ರಮಾಣದಿಂದ ನಿರ್ಣಯ ಮಾಡಿಕೊಳ್ಳಬೇಕಾದ್ದೇನೆಂದರೆ ಎಚ್ಚರದ ಸ್ಥಿತಿಯಲ್ಲಿ ಕನಸಿನ ದೇಶ ಕಾಲ ವಸ್ತು ವ್ಯಕ್ತಿಗಳೊಂದೂ ಎಲ್ಲಿಯೂ ಇರುವುದೇ ಇಲ್ಲ ಎಂದು ಮತ್ತು ಹಾಗಯೇ ಸ್ವಪ್ನಸ್ಥಿತಿಯಲ್ಲಿ ಎಚ್ಚರದ ದೇಶ ಕಾಲ ವಸ್ತು ವ್ಯಕ್ತಿಗಳೊಂದೂ ಎಲ್ಲಿಯೂ ಇರುವುದೇ ಇಲ್ಲವೆಂದು ನಿಶ್ಚಯಮಾಡಿಕೊಳ್ಳಬೇಕು. (ಅಂದರೆ ಸ್ವಪ್ನವು ಹೇಗ ಯುಗಪತ್ ಸೃಷ್ಟಿಯೋ ಹಾಗೆಯೇ ಜಾಗರಾವಸ್ಥೆ ಬಂದಾಗ ಯುಗ್‌ಪತ್ ಸೃಷ್ಟಿ ಆಗುವುದೆಂದು ತಿಳಿಯಬೇಕು. ಅಂದಾಗ ಸೃಷ್ಟಿಯು ಎರಡು ಬಗೆ. ಕ್ರಮಸೃಷ್ಟಿ ಮತ್ತು ಯುಗಪತ್ ಸೃಷ್ಟಿ ಎಂದು. ಪ್ರಲಯಕಾಲದ ತರುವಾಯ ಆಗುವ ಸೃಷ್ಟಿಯು ಕ್ರಮಸೃಷ್ಟಿ. ಜಾಗರ ಮತ್ತು ಸ್ವಪ್ನ ಇವು ಯುಗಪತ್‌ಸೃಷ್ಟಿ ಎಂದು ತಿಳಿಯಬೇಕು.)

ಕಾಲ ಪ್ರವಾಹವು ನಿರಂತರವಾಗಿರುವುದೆನ್ನುವುದೂ ನಿಜವಲ್ಲ. ಎಚ್ಚರವು ಸತ್ಯ ಎಂದು ನಂಬಿಕೊಂಡಿರುವ ಆ ಎಚ್ಚರದ ಪಕ್ಷಪಾತದಿಂದ ಹಾಗೆ ತಿಳಿದುಕೊಂಡಿರುವುದಾಗಿದೆ. ಅವಿದ್ಯಾಮಾಯೆಯಿಂದ ಹಾಗೆ ತೋರುವುದು. ನಮ್ಮ ಅನುಭವ ಪ್ರಮಾಣದಿಂದ ನಿಜವನ್ನು ಗೊತ್ತುಮಾಡಿಕೊಳ್ಳಬೇಕು. ಸುಮ್ಮನೆ ನಂಬುವುದು ತತ್ತ್ವಜ್ಞಾನ ಎನಿಸದು. ಹೀಗೆ ನಮ್ಮ ಅವಸ್ಥೆಗಳಲ್ಲೇ ದೇಶ ಕಾಲಗಳ ಸ್ಥಿತಿ ಎಂದು ನಿಶ್ಚಯವಾಗುವುದರಿಂದ ಜಾಗರಾದ್ಯವಸ್ಥೆಗಳಲ್ಲೂ, ಬಾಲ್ಯಾದ್ಯವಸ್ಥೆಗಳಲ್ಲೂ ನಮ್ಮ ಇರುವು ನಿಶ್ಚಯವಾಗಿರುವಂತೆ ಮರಣ, ಪೂರ್ವಜನ್ಮ ಪುನರ್ಜನ್ಮಗಳಲ್ಲೂ ಇದ್ದೇ ಇರುವುದೆಂದು ಖಚಿತವಾಗುವುದು. ಅಂದಾಗ ನಾನು ಹುಟ್ಟಿದ್ದೇನೆ. ಸಾಯುವೆನು ಎಂಬುದು ವಿಕಲ್ಪವೇ = ಭ್ರಮೆಯೇ ಸರಿ. ಆದ್ದರಿಂದ ಹೊಸದಾಗಿ ಹುಟ್ಟದ ನಾನು ಅಂತ್ಯವಿಲ್ಲದವನೇ, ಮರಣವಿಲ್ಲದವನೇ ಆಗಿರುತ್ತೇನೆಂದು ನಿಶ್ಚಯ. ದೇಹವು ಹುಟ್ಟುವುದು, ಸಾಯುವುದು. ಜಾಗರಾದಿ, ಬಾಲ್ಯಾದಿ ಅವಸ್ಥೆಗಳೂ ದೇಶಕಾಲಗಳೂ ಬರುತ್ತವೆ ಹೋಗುತ್ತವೆ. ಆದರೆ ನಿತ್ಯವಾಗಿರುವ ನಾನು, ಅಂದರೆ ಆಗಮಾಪಾಯಿಯಲ್ಲದ, ಹೇಯ ಉಪಾದೇಯನಲ್ಲದ ನಾನು ನಿತ್ಯ ವರ್ತಮಾನ ಸ್ವಭಾವದವನಾಗಿರುತ್ತೇನೆಂದು ಶಾಶ್ವತ ಎಂದು ತಿಳಿಯಬೇಕು. ನಿಶ್ಚಯ ಮಾಡಿಕೊಳ್ಳಬೇಕು. ಈಗ ಇಲ್ಲಿ ತಾನು ದೇಹಸಂಬಂಧೀ ಎಂದು ತೋರಿದರೂ ಅದು ಪರಮಾರ್ಥ ಸತ್ಯವಲ್ಲ ಎಂಬುದು ಮುಂದೆ ವಿಚಾರವಿವೇಚನೆಯಿಂದ ಗೊತ್ತಾಗುವುದು. ಆದ್ದರಿಂದ ನಾನು ಅನಿತ್ಯನಲ್ಲ. ಬೇರೆ ಪ್ರಮಾಣದಿಂದ ಸಿದ್ಧನಾಗದೇ ಸ್ವಯಮನುಭವದಿಂದಲೇ ಇರತಕ್ಕವನಾದ ನಾನು ಸ್ವಯಂಪ್ರಕಾಶನೂ ಹಾಗೂ ಅಪ್ರಮೇಯನೂ ಆಗಿದ್ದೇನೆ. ನಿತ್ಯಸತ್ಯವಾಗಿದ್ದೇನೆ. ಕನಸಿನಂತೆ ಮಿಥ್ಯೆ ಅಲ್ಲ. ದೇಹದಂತೆ ಪರಿಚ್ಛಿನ್ನನಲ್ಲ. (ಇಷ್ಟೇ ಎಂಬ ಪರಿಮಿತಿ ಇಲ್ಲದವನು) ಅಂದರೆ ಅಂಕೆ, ಅಳತೆ, ತೂಕ, ಹಿಂದೆ, ಮುಂದೆ, ಮೇಲೆ, ಕೆಳಗೆ, ಒಳಗೆ, ಹೊರಗೆ, ಇಷ್ಟು, ಅಷ್ಟು, ಭೂತ ಭವಿಷ್ಯತ್ ವರ್ತಮಾನ ಎಂಬ ಯಾವ ಭೇದವೂ ಇಲ್ಲದವನಾಗಿರುವೆನು. ನಿರಂತರಸಮವಾಗಿರುವೆನು. ಅಪರಿಚ್ಛಿನ್ನ ಅರ್ಥಾತ್ ದೇಶಕಾಲ ಪರಿಪೂರ್ಣನು ಎಂದು ನಿರ್ಣಯ ಮಾಡಿಕೊಳ್ಳಬೇಕು. ವೃದ್ಧಿ ಕ್ಷಯವಿಲ್ಲದ, ಪರಿಣಾಮ ವಿಕ್ರಿಯೆಯಿಲ್ಲದ ನಾನು ಈ ದೇಹಾದಿ ಬಾಹ್ಯ ವಿಷಯಗಳು ಎಲ್ಲವನ್ನೂ ಅರಿಯುವ ಚೈತನ್ಯ = ಚಿಚ್ಛಕ್ತಿ ಸ್ವಭಾವವುಳ್ಳವನಾಗಿರುವುದರಿಂದ ನಾನು ವಿಜ್ಞಾನಘನ ಸ್ವರೂಪದ

ಚೇತನನಾಗಿರುತ್ತೇನೆ. ಘಟ ಪಟ ವಸ್ತುಗಳಂತೆ ಜಡಪದಾರ್ಥವಲ್ಲ. ದೀಪದಂತೆ ಸ್ವಯಂಪ್ರಕಾಶ = ಚಿದ್ರೂಪ = ಚಿಚ್ಛಕ್ತಿಪೂರ್ಣನಾಗಿದ್ದೇನೆ ಎಂದರಿಯಬೇಕು. ಇಷ್ಟು ವಿಚಾರದಿಂದ ನಿಶ್ಚಯ ಮಾಡಿಕೊಳ್ಳಬೇಕಾದ್ದೇನೆಂದರೆ – (ದೇಹೇಂದ್ರಿಯಗಳಲ್ಲದ) ನಾನು ದೇಶ ಕಾಲಾತೀತ, ನಿತ್ಯ ವರ್ತಮಾನಸತ್ಯ, ಸ್ವಯಂಪ್ರಕಾಶ, ಸ್ವಯಂಸಿದ್ಧ, ಅಪ್ರಮೇಯ ಹಾಗೂ ನಿತ್ಯ ಚೈತನ್ಯಪೂರ್ಣ ಚೇತನ ಎಂದು ನಿರ್ಣಯ ಮಾಡಿಕೊಳ್ಳಬೇಕು.

ಹೀಗೆ ನಿಶ್ಚಯಮಾಡಿಕೊಂಡ ಬಳಿಕ ಈಗ ಇಂತಹ ಸ್ವಭಾವದ ನಾನು ಯಾರು? ನಿಜವಾದ ನನ್ನ ಸ್ವರೂಪವೇನು? ಎಂಬುದನ್ನು ವಿಚಾರ ಮಾಡಿಯೇ ಕಂಡುಕೊಳ್ಳಬೇಕು. ವಿಚಾರ ಮಾಡದೇ ಸುಮ್ಮನೆ ತಿಳಿಯುವುದಿಲ್ಲ. ಈಗ ಸ್ವಾಭಾವಿಕವಾಗಿ ಎಲ್ಲರೂ ತಿಳಿದುಕೊಂಡಿರುವ ಪರಿ ಏನೆಂದರೆ – ಈ ಸ್ಥೂಲ ದೇಹ ಮೊದಲುಗೊಂಡು ಒಳಗಿನ ಚೈತನ್ಯಪರ್ಯಂತ ಒಟ್ಟು ಸೇರಿಸಿಕೊಂಡು ಈ ರಾಶಿಯನ್ನು ನಾನು ನಾನು ಎಂದು ಭಾವಿಸಲಾಗುವುದು. ಮುಖ್ಯವಾಗಿ ದೇಹವನ್ನೇ ನಾನು = ಮನುಷ್ಯ ಎಂದುಕೊಳ್ಳಲಾಗುವುದು. ಆದರೆ ಇದು ಸರಿಯಲ್ಲ. ತಪ್ಪು ತಿಳಿವಳಿಕೆಯಾಗಿದೆ. ನಿಜವನ್ನು ಅರಿಯದಿರುವುದರಿಂದ ಅಜ್ಞಾನ = ಅವಿದ್ಯೆಯಿಂದ ಹಗ್ಗದಲ್ಲಿ ಹಾವು ಎಂಬಂತೆ ತಪ್ಪು ತಿಳಿವು ಉಂಟಾಗಿರುವುದು. ಈ ನಾನು ಎಂಬ ಜ್ಞಾನಾನುಭವದಲ್ಲಿ ಇರುವ ಸೂಕ್ಷ್ಮವನ್ನು, ಪ್ರಕಾರಪಡಿರುವುದನ್ನು ಗಮನಿಸಬೇಕು. ಅದನ್ನೇ ಈ ಎರಡನೆಯ ವಾಕ್ಯವು ತಿಳಿಸುವುದು.

೨. ಅಹಮ್ ಆತ್ಮಾ = ನಾನು ಆತ್ಮನು (ಬೇರೆ ಏನೂ ಅಲ್ಲ) ಎಂದು ಬೋಧಿಸುತ್ತಿದೆ. ಮನುಷ್ಯನು ಸ್ವಾಭಾವಿಕವಾಗಿ ತಿಳಿದುಕೊಂಡಿರುವುದೇನೆಂದರೆ - ನಾನು ಮನುಷ್ಯ = ದೇಹೀ, ನಾನು ಗಂಡಸು, ಅಥವಾ ನಾನು ಹೆಂಗಸು. ನನಗೆ ಇಂತಹ ಹೆಸರು ಎಂದು ಮುಂತಾಗಿ ನಂಬಿಕೊಂಡಿರಲಾಗುತ್ತಿದೆ. ಈ ವಾಕ್ಯವು ನಾನು ಆತ್ಮನು ಎಂದು ತಿಳಿಸುತ್ತದೆ. ಅಂದರೆ ಈಗ ವ್ಯವಹಾರದಲ್ಲಿ ತಿಳಿದುಕೊಂಡಿರುವಂತೆ ನಾನು ಎಂಬುದು ಮನಸ್ಸಿನ ಭಾವನೆ ಅಲ್ಲ. ದೇಹೀ ಅಲ್ಲ, ಮನಃ ಕಲ್ಪಿತನಲ್ಲ, ಅಹಂಕಾರವಲ್ಲ, ಸ್ವಯಂಪ್ರಕಾಶ ಸ್ವಯಂಸಿದ್ಧನಾದ ನಾನು ಚೇತನ ಆತ್ಮನು, ಅಪರೋಕ್ಷ ನಿತ್ಯ ಸತ್ಯ ಚೈತನ್ಯವಸ್ತು ಎಂದು ತಿಳಿಸಿಕೊಡುತ್ತಿದೆ. ಈ ವಾಕ್ಯವು ಇಲ್ಲದುದನ್ನು ಅಲ್ಲದುದನ್ನು ತಿಳಿಸುತ್ತಿಲ್ಲ. ನಿಜವಾದುದನ್ನೇ ಬೋಧಿಸುತ್ತಿರುವುದೆಂದು ವಿವೇಚನೆ ಮಾಡಿಕೊಂಡರೆ ನಿಜಾಂಶವು ನಮಗೇ ತಿಳಿಯುವುದು. ನಾನು ಎಂದು

ಅಹಮಾತ್ಮಾ ಸರ್ವಭೂತಾಶಯಸ್ಥಿತಃ (ಗೀತಾ ೧೦-೨೦)

ಬಗೆಯುವಾಗಲೆಲ್ಲಾ ಅದರಲ್ಲಿ ತಾನು = ಸ್ವಯಂ ಎಂಬುದೂ ಸೇರಿಕೊಂಡಿರುವುದನ್ನು ಗಮನಿಸಬೇಕು. ಈ ನಾನು ಮತ್ತು ತಾನು ಎಂಬ ಆಲೋಚನೆಯಲ್ಲಿ ಒಂದು ನಾನು ದೇಹೀ ಎಂಬುದು ಅಹಂಕಾರವಾಗಿದೆ. ಇದು ನಿದ್ದೆಯಲ್ಲಿ ಇರುವುದಿಲ್ಲ. ಮನೋಭಾವವಾಗಿದೆ. ಇದು ಕಲ್ಪಿತ. ಮತ್ತೊಂದು ತಾನು = ಸ್ವಯಂ ಎಂಬುದು ಆತ್ಮ ವಸ್ತುವಾಗಿರುತ್ತದೆ. ಇದೇ ನಿತ್ಯ ಚೈತನ್ಯ ಶುದ್ಧ ಆತ್ಮನು ವಾಸ್ತವ ಸತ್ಯ. ಇದು ಮೂರು ಅವಸ್ಥೆಗಳಲ್ಲೂ ಇದ್ದೇ ಇರುವುದು. ಈ ಸ್ವಯಂ ಎಂಬ ಆತ್ಮನೇ ನಿಜವಾದ ನಾನು ಎಂದು ಕಂಡುಕೊಳ್ಳಬೇಕು. ಅಹಂಕಾರವು ನಾನಲ್ಲ. ಮನೋಭಾವವು ನಾನಲ್ಲ. ಮನಃ ಕಲ್ಪಿತ ಮಿಥ್ಯಾತ್ಮನು ನಾನಲ್ಲ. ಅಂದಾಗ ಈಗ ಸ್ವಾಭಾವಿಕವಾಗಿ ತಿಳಿದುಕೊಂಡಿರುವಂತೆ ದೇಹೇಂದ್ರಿಯ ಪ್ರಾಣಗಳ ರಾಶಿಯು ನಾನಲ್ಲ. ಅವಕ್ಕೆ ವಿಲಕ್ಷಣವಾಗಿದ್ದೇನೆ. ಅವನ್ನು ನೋಡುವ, ಅರಿಯುವ ಸಾಕ್ಷಿ ಚೈತನ್ಯ ನಾನು ಬೇರೆ ಇದ್ದೇನೆ. ನಾನು ಆತ್ಮಾ. ನಾನು ಗಂಡಸೂ ಅಲ್ಲ, ಹೆಂಗಸೂ ಅಲ್ಲ. ಹೆಣ್ಣು - ಗಂಡು ಎಂಬುದು ದೇಹಕ್ಕೆ ಸೇರಿದ್ದು. ಆತ್ಮನಲ್ಲಿ ಸೇರಿದ್ದಲ್ಲ. ನಾನು ಆತ್ಮನಾಗಿದ್ದೇನೆ. ನಾನು ದೇಹ ಅಲ್ಲ, ಹುಟ್ಟಿದ ಮನುಷ್ಯನಲ್ಲ. ಲೋಕ ವ್ಯವಹಾರದಲ್ಲಿ ಸೇರಿದ ಪದಾರ್ಥವು ನಾನಲ್ಲ. ವ್ಯವಹಾರವನ್ನು ಮೀರಿದ ಲೋಕೋತ್ತರ ವಸ್ತುವು ನಾನು ಆತ್ಮನು ಚೈತನ್ಯಘನ ಚೇತನ ಆಗಿದ್ದೇನೆ. (ಅರಿಯುತ್ತಿರುವುದೇ ಯುಕ್ತಿ) ನಾನು = ಆತ್ಮನು ಅಲೌಕಿಕ ದಿವ್ಯವಸ್ತು ಎಂದು ತಿಳಿಯಬೇಕು. ನಾನು ಎಂಬ ಗ್ರಹಣೆ = ತಿಳಿಪಿನಲ್ಲಿ ಎರಡು ಪ್ರಕಾರಗಳಿರುವುವು. ಒಂದನೆಯದು ನಾನು ಎಂಬುದು ಅಹಂಕಾರ. ಮತ್ತೊಂದು ತಾನು = ಸ್ವಯಂ ಎಂಬುದು ನಿತ್ಯ ಸಿದ್ಧ ಆತ್ಮಾ. ನಾನು ಎಂಬ ಅಹಂಕಾರವು ದೇಹೇಂದ್ರಿಯಾದಿ ಪಕ್ಷಕ್ಕೆ, ವ್ಯವಹಾರಕ್ಕೆ ಸೇರಿರುವುದಾಗಿರುತ್ತದೆ. ಅದು ಜಡ ಪ್ರಕೃತಿ ಪರಿಣಾಮರೂಪವಾದುದು. ಅದೂ ಜಡವೇ. ತಾನು = ಆತ್ಮನು ಚೇತನ ದಿವ್ಯ ವಸ್ತುವಾಗಿದೆ. ಸ್ವಯಂ ತಾನು ಚೇತನನಾಗಿದ್ದೇನೆ. ಅಂದರೆ ಶುದ್ಧ ಆತ್ಮನಾಗಿದ್ದೇನೆಂದು ಕಂಡುಕೊಳ್ಳಬೇಕು. ಅಂದಾಗ ಜಡಪದಾರ್ಥಗಳಾದ ಭೌತಿಕಗಳಾದ ದೇಹೆಂದ್ರಿಯಾದಿಗಳು ಬೇರೆ. ಅಭೌತಿಕ ದಿವ್ಯ ಚೇತನ ವಸ್ತುವಾದ ತಾನು ಬೇರೆ. ಅರಿಯುವವನಾದ (ಚೇತನನಾದ) ತಾನು ವಿಲಕ್ಷಣನಾಗಿದ್ದು ಜಡವಾದ ದೇಹೇಂದ್ರಿಯ ಸಂಘಾತಕ್ಕೆ ಸೇರದೆ ಅವುಗಳ ಅಂತರಾತ್ಮನು = ಪ್ರತ್ಯಗಾತ್ಮನಾಗಿರುತ್ತೇನೆ ಎಂದು ನಿರ್ಣಯಾನುಭವ ಮಾಡಿಕೊಳ್ಳಬೇಕು.

ದೇಹೇಂದ್ರಿಯಾದಿಗಳು ಯಾವಾಗಲೂ ಚೇತನಾತ್ಮನೊಡನೆಯೇ ಇರುವುದರಿಂದ ಈ ಆತ್ಮ ಅನಾತ್ಮರ ಭೇದವು ಸುಲಭವಾಗಿ ತಿಳಿಯುವುದಿಲ್ಲ. ಮತ್ತು ಆತ್ಮ ಸನ್ನಿಧಿಯಲ್ಲಿ ದೇಹೇಂದ್ರಿಯಗಳೂ ಚೈತನ್ಯಗೊಂಡಿರುವುದರಿಂದಲೂ ಭೇದಗ್ರಹಣೆಯು ಸುಲಭವಲ್ಲ. ಕಾದ ನೀರು, ಕಾದ ಲೋಹ ಅವುಗಳಲ್ಲಿ ಸುಡುವುದು, ಪ್ರಕಾಶಿಸುವುದು ಬೆಂಕಿಯೇ ಆದರೂ ನೀರು ಸುಡುತ್ತದೆ. ಲೋಹ ಪ್ರಕಾಶಿಸುತ್ತದೆ ಎಂಬ ಭಾವನೆ ವ್ಯವಹಾರವುಂಟಾಗುವುದಷ್ಟೆ? ಹಾಗೆಯೇ ಜ್ಞಾನ ಕರ್ಮವ್ಯವಹಾರವು ತಾನು ಎಂಬ ಆತ್ಮಚೈತನ್ಯಮೂಲಕವೇ ಆಗಿರುತ್ತಿದ್ದರೂ ವಿಚಾರಮಾಡಿಕೊಳ್ಳದೇ ವಿವೇಕ = ತತ್ತ್ವಜ್ಞಾನವಿಲ್ಲದಿರುವಾಗ ಮನ ಆದಿ ದೇಹವೇ ನಾನು ಎಂಬ ಭ್ರಾಂತಿಜ್ಞಾನವುಂಟಾಗುತ್ತಿರುವುದು. ಆತ್ಮನನ್ನೂ ಆತ್ಮನಲ್ಲದ ಅನಾತ್ಮ ದೇಹಾದಿಗಳನ್ನೂ ವಿವೇಚಿಸಿಕೊಂಡು ವಿವೇಕ ಮಾಡಿಕೊಂಡಾಗ = ಅನುಭವವಾದಾಗ ದೇಹಾದಿ ಅಹಂಕಾರಪರ್ಯಂತ ಒಂದೂ ನಾನಲ್ಲ, ಅವು ಬೇರೆ ಜಡಪದಾರ್ಥಗಳು. ಅನಾತ್ಮಗಳು. ನಾನು ಬೇರೆ. ನಾನು ಚೇತನಾತ್ಮನಾಗಿದ್ದೇನೆ ಎಂದು ದೃಢ ಜ್ಞಾನವುಂಟಾಗುವುದು. ಹೀಗೆ ವಿವೇಕ ಮಾಡಿಕೊಂಡಾಗ ಜಾಗರಾದಿ ಅವಸ್ಥೆಗಳಲ್ಲಿ ತೋರುವ ದೇಹೇಂದ್ರಿಯಾದಿಗಳನ್ನೂ, ಈ ಬಾಹ್ಯಪ್ರಪಂಚವನ್ನೂ ನೋಡುವ, ಅರಿಯುವ ತಾನು ನಿತ್ಯ ಶುದ್ಧ ಆತ್ಮ = ಚೇತನನಾಗಿದ್ದೇನೆ ಎಂದು ನಿಶ್ಚಯವಾಗುವುದು. ಚೇತನವೇ ಅರಿಯುವ ಸಾಕ್ಷಿಯು. ನಾನು ಸಾಕ್ಷಿ ಚೇತನಮಾತ್ರ. ಅರಿಯಲ್ಪಡುವವನಲ್ಲ, ವ್ಯವಹಾರದಲ್ಲಿ ಸೇರಿಲ್ಲ. ಸೇರಿದವನಲ್ಲ. ದೇಹಾದಿಗಳು ಮತ್ತು ಜಗತ್ಪದಾರ್ಥಗಳು ಜಡವಾಗಿದ್ದು ನನ್ನ ಜ್ಞಾನಕ್ಕೆ ವಿಷಯಗಳಾಗಿರುತ್ತವೆ. ಅವು ಏನನ್ನೂ ತಿಳಿಯಲಾರವು. ತಿಳಿಯುವವನು ನಾನೇ. ಆದ್ದರಿಂದ ನಾನು ಸಾಕ್ಷಿ ಆತ್ಮಾ, ಆತ್ಮನೇ ಚೇತನನು. ಚೇತನ ಅಂದರೆ ಚೈತನ್ಯಘನ ಎಂದರ್ಥ. ಚೈತನ್ಯ ಅಂದರೆ ಚಿಚ್ಛಕ್ತಿಸ್ವರೂಪವಾದುದು. ಶಕ್ತಿಯು ಚಿಚ್ಛಕ್ತಿ ಜಡಶಕ್ತಿ ಎಂದು ಎರಡು ಬಗೆಯಾಗಿರುತ್ತದೆ. ಇವನ್ನೇ ಜ್ಞಾನಶಕ್ತಿ ಕ್ರಿಯಾಶಕ್ತಿ ಎಂದೂ ಕರೆಯುತ್ತಾರೆ. ಚಿದ್ವಸ್ತುವು ಸ್ವಯಂ ಪ್ರಕಾಶವೂ ಜ್ಞಾನಾನುಭವ ಸ್ವಭಾವವೂ ಆಗಿರುತ್ತದೆ. ಇಂತಹ ಆತ್ಮನೊಡನೆ ಯಾವಾಗಲೂ ಇದ್ದುಕೊಂಡಿರುವ ಅಹಂಕಾರಾದಿ ದೇಹೇಂದ್ರಿಯಾದಿಗಳಲ್ಲೆಲ್ಲಾ ಆತ್ಮನ ಚಿಚ್ಛಕ್ತಿಯು ವ್ಯಾಪ್ತವಾಗಿ ತುಂಬಿರುವುದರಿಂದ ದೇಹಾದಿಗಳೂ ಚೈತನ್ಯಪೂರ್ಣವಾಗಿರುತ್ತವೆ. ಆದಾಗ್ಯೂ ನಿಜದಲ್ಲಿ ಆತ್ಮನೇ = ಚಿದ್ವಸ್ತುವು ಎಲ್ಲವನ್ನೂ ಅರಿಯುವವನಾಗಿರುವುದರಿಂದ ಅವನು

ವಿಷಯೀ = ಸಾಕ್ಷೀ ಆಗಿರುತ್ತಾನೆ. ಅವನಿಗೆ ದೇಹಾದಿಗಳೆಲ್ಲವೂ ವಿಷಯಗಳಾಗಿರುತ್ತವೆ. ಅವು ಅನಾತ್ಮಗಳೇ. ಜಡಗಳೇ. ಅವಕ್ಕೆ ಜ್ಞಾನಪ್ರಕಾಶ ಸ್ವಭಾವವಿರುವುದಿಲ್ಲ. ವಿದ್ಯುತ್ ಮತ್ತು ಯಂತ್ರಗಳಲ್ಲಿರುವ ಕ್ರಿಯಾಶಕ್ತಿಯು ಜಡಶಕ್ತಿಯಾಗಿರುತ್ತದೆ. ಅದಕ್ಕೆ ಅರಿಯುವ ಚಿಚ್ಛಕ್ತಿಯಿರುವುದಿಲ್ಲ. ನಾನು ಚೈತನ್ಯಪೂರ್ಣನಾದ (ಚಿಚ್ಛಕ್ತಿಯುಳ್ಳ) ಚೇತನ ಆತ್ಮನು. ಎಲ್ಲವನ್ನೂ ಅರಿಯುತ್ತೇನೆ. ಇದು ದೇಹ. ಇವು ಪ್ರಾಣ. ಇವು ಇಂದ್ರಿಯಗಳು. ಇದು ಮನಸ್ಸು. ಇದು ಬುದ್ಧಿ. ಇದು ಅಹಂಕಾರ ಇವು ಅವಸ್ಥೆಗಳು ಎಂಬುದಾಗಿ ಅವನ್ನು ವಿಷಯೀಕರಿಸಿಕೊಂಡು ನಾನು ಅರಿಯುತ್ತಿದ್ದೇನೆ. ಸಾಕ್ಷೀ ಚೇತನನಾಗಿದ್ದೇನೆ. ದೇಹಾದಿಗಳು ನನ್ನನ್ನು ಅರಿಯುತ್ತಿರುವುದಿಲ್ಲ. ದೇಹಾದಿಗಳಲ್ಲೆಲ್ಲಾ ನಾನು ವ್ಯಾಪಿಸಿಕೊಂಡಿರುತ್ತಾ ಅವನ್ನು ಪ್ರಕಾಶಪಡಿಸುತ್ತಲೂ ಚೇತನಗೊಳಿಸುತ್ತಲೂ ಇರುವೆನು. ದೇಹಾದಿರಾಶಿಗೆ ನಾನು ಸೇರಿರುವುದಿಲ್ಲ. ಚಿದ್ರೂಪ ನಾಗಿರುವುದರಿಂದ ನಾನು = ಆತ್ಮನು ವಿಲಕ್ಷಣವಾಗಿದ್ದೇನೆ. ಬೇರೆಯಾಗಿ ಇದ್ದೇನೆ. ಪ್ರಕಾಶ್ಯ ಪದಾರ್ಥಗಳನ್ನು ಪ್ರಕಾಶಪಡಿಸುವ ದೀಪ-ಬೆಳಕು ಬೇರೆಯಾಗಿ ಇರುವುದಷ್ಟೆ! ಸುಡುವ ಬೆಂಕಿಯು ಸೌದೆಯಿಂದ ಬೇರೆಯಾಗಿರುವುದಷ್ಟೆ! ಹಾಗೆಯೇ ಅನಾತ್ಮ ವಿಷಯಗಳಿಗಿಂತ ವಿಷಯೀ ಆತ್ಮನು ಬೇರೆ = ಪೃಥಕ್ಕಾಗಿರುವನು. ಆತ್ಮನು ಅಲೌಕಿಕನಾಗಿದ್ದು ಅತೀಂದ್ರಿಯನು. ಅಂದರೆ ಇಂದ್ರಿಯಗೋಚರನಲ್ಲ. ಆಕಾಶದಂತೆ ರೂಪರಹಿತನೂ, ಸೂಕ್ಷ್ಮನೂ, ಬೆಳಕಿನಂತೆ ವ್ಯಾಪಕನೂ ಆಗಿರುತ್ತಾನೆ. ಆತ್ಮನು ಅಪರಿಚ್ಛಿನ್ನನಾಗಿರುವುದರಿಂದ ಹೊರಗಡೆ ಮತ್ತು ದೇಹದ ಒಳಗಡೆ ಪರಿಪೂರ್ಣವಾಗಿ ಇದ್ದುಕೊಂಡು ತಾನು ತೋರಿಕೊಳ್ಳಲು ಅರ್ಹ ಸ್ಥಳವಾದ ಅಂತಃಕರಣದಲ್ಲಿ = ಬುದ್ಧಿ ಮನಸ್ಸಿನಲ್ಲಿ ನಾನು ನಾನು ಎಂದೇ ಹೊಳೆಯುತ್ತಾನೆ. ತೋರಿಕೊಳ್ಳುತ್ತಾನೆ. ಹೀಗೆ ಜ್ಞಾನರೂಪದಿಂದ ತಾನೇ ಹೊಳೆಯುವ ಆತನನ್ನು ಸ್ವಯಂ ನಾನು ಆತ್ಮಾ ಎಂದು ವಿಂಗಡಿಸಿ ಬೇರೆ ಎಂದು ನಿಶ್ಚಯಮಾಡಿಕೊಳ್ಳಬೇಕು. ಅವನೇ ದೇಹಾದಿಗಳನ್ನು ಚೇತನಗೊಳಿಸುತ್ತಿರುವ ಆತ್ಮಾ = ಅನ್ತರ್ಯಾಮೀ ಪ್ರತ್ಯಗಾತ್ಮಾ ಎಂದು ಕಂಡು ಹಿಡಿಯಬೇಕು. ಆತ್ಮಾ ಎಂದರೆ ಸ್ವಯಂಪ್ರಕಾಶ ಸ್ವಯಂಸಿದ್ಧನಾಗಿದ್ದು ದೇಹೇಂದ್ರಿಯಗಳನ್ನು ವ್ಯಾಪಿಸಿಕೊಂಡಿದ್ದು, ಪ್ರಕಾಶಪಡಿಸುತ್ತಾ, ಅರಿಯುವ ಸಾಕ್ಷಿ ಸತ್ಯಸ್ವರೂಪ ಎಂದರ್ಥ. ಎಲ್ಲವನ್ನೂ ಅರಿಯುವವನು ಪ್ರತ್ಯಗಾತ್ಮನೇ. ಜಡವಾದ ಅನಾತ್ಮವು ಅರಿಯುವುದಿಲ್ಲ. ಅವನನ್ನು

ಅರಿಯುವವರು ಯಾರೂ ಇಲ್ಲ. ಅಂತಹ ಆತ್ಮನೇ ನಾನು. ಬೆಳಕಿನಂತೆ ಆತ್ಮನು. ಕತ್ತಲೆಯಂತೆ ಅನಾತ್ಮ ದೇಹಾದಿಗಳು. ಅಂದಾಗ ಈಗ ಇಲ್ಲಿ ನಾನು ಮನುಷ್ಯ = ದೇಹಿ ಹುಟ್ಟಿದ್ದೇನೆ. ಗಂಡಸು, ಹೆಂಗಸು ಎಂದಾಗಿ ತಿಳಿದುಕೊಂಡಿರುವುದೆಲ್ಲವೂ ತಪ್ಪು ತಿಳುವಳಿಕೆಯೇ. ಭ್ರಾಂತಿಯೇ ಎಂಬುದು ಗೊತ್ತಾಗುವುದು. ಹುಟ್ಟಿರುವುದು ದೇಹ. ನಾನು ಆತ್ಮನು. ಹೊಸದಾಗಿ ಹುಟ್ಟುವವನಾಗಿಲ್ಲ. ಏಕೆಂದರೆ ಈ ದೇಹ ಹುಟ್ಟಲು ಪೂರ್ವ ಕರ್ಮ ಇರಬೇಕು. ಅಂತಹ ಕರ್ಮ ಮಾಡಿದ ಜೀವ = ನಾನು ಅದಕ್ಕೆ ಪೂರ್ವ ಇರಲೇಬೇಕು. (ಇದೇ ಯುಕ್ತಿ ಆದ್ದರಿಂದ ತಾನು ಆತ್ಮನು ಪೂರ್ವಭವ) ಬೆಳಕು ಕತ್ತಲೆ ಅಲ್ಲ. ಕತ್ತಲೆಯು ಬೆಳಕಲ್ಲ. ಅವು ಪರಸ್ಪರ ಪರಿಣಾಮಗೊಳ್ಳುವುದಿಲ್ಲ. ಅಭಿನ್ನವಾಗಿಯೂ ಇರುವುದಿಲ್ಲ. ಹಾಗೆಯೇ ಜಡ ಚೇತನಗಳಾದ, ಪರಸ್ಪರ ವಿಲಕ್ಷಣವಾದ ಆತ್ಮ ಅನಾತ್ಮಗಳು ಬೆರತು ಕೊಂಡಿರುವುದಿಲ್ಲ. ಪರಿಣಾಮಗೊಳ್ಳುವುದೂ ಇಲ್ಲ. ಅಭೇದವಾಗಿರುವುದು ಅಸಂಭವ. ನ್ಯಾಯ-ಲಕ್ಷಣ ಸ್ವಭಾವಗಳು ಹೀಗೆ ಬೇರೆಬೇರೆಯಾಗಿರುವುದರಿಂದ ನಾನು = ಆತ್ಮನು = ತಾನು ದೇಹವಲ್ಲ. ಇಂದ್ರಿಯಗಳಲ್ಲ. ಪ್ರಾಣವಲ್ಲ. ಮನೋಬುದ್ಧಿಗಳಲ್ಲ. ನಾನು ನಾನು ಎಂದು ಬಗೆಯುವ ಅಹಂಕಾರವೂ ತಾನಲ್ಲ = ಆತ್ಮನಲ್ಲ ಎಂಬೀರೀತಿ ಅನಾತ್ಮಗಳನ್ನೆಲ್ಲಾ ಹೊರತಳ್ಳಿ ಅಂದರೆ (ಅಪವಾದಮಾಡಿಕೊಂಡು) ನಿರಾಕರಿಸಿಕೊಂಡು ತಾನು ಆತ್ಮನು ಬೇರೆ ಎಂದು ಪೃಥಕ್ಕಾಗಿ ನಿಂತು, ನಿಶ್ಚಯದಲ್ಲಿ ನೆಲೆಸಿದರೆ ಆಗ ಗೊತ್ತಾಗುವುದೇನೆಂದರೆ - ತಾನು ದೇಹಾದಿಗಳನ್ನು ನೋಡುವ, ಅರಿಯುವ, ನಿತ್ಯ ಸಾಕ್ಷೀ ಸತ್ಯಚೇತನ = ಆತ್ಮನು ಎಂದು ದೃಢವಾಗುವುದು ಮತ್ತು ನಾಮ ರೂಪಗಳಿಲ್ಲದ ಆತ್ಮನು = ತಾನು ಆಕಾಶದಂತೆ - ಬೆಳಕಿನಂತೆ, ನಿರವಯವ, ಅಪರಿಚ್ಛಿನ್ನ, ವ್ಯಾಪಕ, ನಿರಂಶ, ಪರಿಣಾಮ, ಕ್ರಿಯೆ, ವಿಕ್ರಿಯೆ ಇಲ್ಲದವ, ನಿರ್ಮಲ, ಅಸಂಗ, ಶುದ್ಧ ಎಂದೂ ತಿಳಿಯುವುದು. ಸದಾ ಸಾಕ್ಷಿ ಚೈತನ್ಯಸ್ವರೂಪದವನೇ ಎಂದೂ ಗೊತ್ತಾಗುವುದು. ಜಾಗ್ರತ್ ಸ್ವಪ್ನ ಸುಷುಪ್ತಿಗಳು ಒಂದಾಗುತ್ತಲೊಂದು ಬಂದು - ಹೋಗುತ್ತಿರುವುದು ತನಗೆ ತಿಳಿಯುತ್ತಿರುತ್ತದೆ. ಬಾಲ್ಯಾದಿ ಅವಸ್ಥೆಗಳೂ ಬರುವುದೂ ತೊಲಗುವುದೂ ಸದಾ ಇರುವ ತನಗೆ ಗೋಚರವಾಗುತ್ತದೆ. ಆದ್ದರಿಂದ ಅವಸ್ಥೆಗಳು ಬೇರೆ. ನಾನು ಬೇರೆ. ಹೀಗೆ ತಾನು ಸಾಕ್ಷಿಮಾತ್ರನೆಂದು ನಿಶ್ಚಯ ಮಾಡಿಕೊಂಡಾಗ ಮತ್ತೂ ತಿಳಿಯುವುದೇನೆಂದರೆ - ಸ್ವಪ್ನದಲ್ಲಿ ತಾನು ನೋಡಿದ, ಮಾಡಿದ, ವಸ್ತುಗಳ,

ಲಾಭನಷ್ಟಗಳ, ಸುಖ-ದುಃಖಗಳ, ಕಾರ್ಯ ವ್ಯವಹಾರಗಳ ಸಂಬಂಧ (ಲೇಪ - ಅಂಟು) ಆತ್ಮನಾದ ತನಗೆ ಹೇಗೆ ಇರುವುದಿಲ್ಲವೋ ಹಾಗೆಯೇ ಈ ಜಾಗ್ರತ್ಕಾಲದಲ್ಲಿಯೂ ಮಾಡಿದ ವ್ಯವಹಾರ, ಅನುಭವಿಸಿದ ಸುಖ-ದುಃಖ, ಧರ್ಮ ಅಧರ್ಮ ಮತ್ತು ಪುಣ್ಯ ಪಾಪ ಕರ್ಮಗಳ ಸಂಬಂಧವೂ ಸತ್ಯಚೇತನನಾದ ತನಗೆ ನಿಜವಾಗಿ ಇರುವುದಿಲ್ಲೆಂದು ಗೊತ್ತಾಗುವುದು. ಹಾಗೆ ನಿಶ್ಚಯಮಾಡಿಕೊಳ್ಳಬೇಕು. ಈ ಜಾಗ್ರತ್ತೂ ಮತ್ತೊಂದು ಬಗೆಯ ಸ್ವಪ್ನ - (ಅವಿದ್ಯಾ ಎಂಬ ಮೋಹನಿದ್ರೆಯಲ್ಲಿ ತೋರುವ ಸ್ಥಿರಸ್ವಪ್ನ) ಎಂದೇ ನಿರ್ಣಯವಾಗುವುದು. ನಿಜವು ಹೀಗಿರುವುದರಿಂದ ದೇಹೇಂದ್ರಿಯಗಳಿಗಿಂತ ಬೇರೆಯಾಗಿರುವ ನಾನು = ಆತ್ಮನು ಲೋಕೋತ್ತರವಸ್ತು ಎಂದು ನಿಶ್ಚಯವೇ ಸಿದ್ಧವಾಗುವುದು.

ಈ ಬಾಹ್ಯದ ಲೋಕವ್ಯವಹಾರವು ಆತ್ಮನಿಗೆ ಸಂಬಂಧಪಟ್ಟದ್ದಲ್ಲ. ವ್ಯವಹಾರವು ಮಾತು, ಮನಸ್ಸು ಇಂದ್ರಿಯ ಮತ್ತು ದೇಹ ಇವುಗಳಿಂದ ನಡೆಯುತ್ತಿರುತ್ತದೆ. ಬುದ್ಧಿಯಿಂದ ತಿಳಿಯುವುದು. ಚಿತ್ತದಿಂದ ಚಿಂತಿಸುವುದು, ಅಹಂಕಾರದಿಂದ ಭಾವಿಸುವುದು, ಮನಸ್ಸಿನಿಂದ ಆಲೋಚಿಸುವುದು, ಕಣ್ಣಿನಿಂದ ನೋಡುವುದು, ಕಿವಿಯಿಂದ ಕೇಳುವುದು, ತ್ವಕ್ಕಿನಿಂದ ಸ್ಪರ್ಶಿಸುವುದು, ಮೂಗಿನಿಂದ ಮೂಸುವುದು, ನಾಲಿಗೆಯಿಂದ ಆಸ್ವಾದಿಸುವುದು ಮತ್ತು ಮಾತನಾಡುವುದು, ಪ್ರಾಣದಿಂದ ಜೀವಿಸುವುದು, ಕಾಲಿನಿಂದ ನಡೆದಾಡುವುದು, ಕೈಗಳಿಂದ ಕೆಲಸ ಮಾಡುವುದು. ದೇಹದಿಂದ ಹೋಗುವುದು ಬರುವುದು. ಹೀಗೆ ಅವಕ್ಕೆಲ್ಲಾ ಸದಾ ಆತ್ಮನ ಸನ್ನಿಧಿ ಇರುವುದರಿಂದ ಸಕಲ ಕ್ರಿಯಾವ್ಯವಹಾರಗಳೂ ದೇಹ ಇಂದ್ರಿಯಗಳಿಂದಲೇ ನಡೆಯುತ್ತಿರುತ್ತವಾದ್ದರಿಂದ ಅವಕ್ಕೇ ಸೇರಿದವಾಗಿರುತ್ತವೆ. ಆತ್ಮನಿಗೆ ಸೇರಿರುವುದಿಲ್ಲ. ಅಂತೆಯೇ ಹುಟ್ಟು ಸಾವು, ವೃದ್ಧಿಕ್ಷಯಗಳು ದೇಹಕ್ಕೆ ಸೇರಿದ್ದು. ಹಸಿವು ಬಾಯಾರಿಕೆಗಳು ಪ್ರಾಣಕ್ಕೆ ಸೇರಿದ್ದು. ಶೋಕ ಮೋಹಗಳು ಚಿತ್ತಕ್ಕೆ ಸೇರಿದ್ದು. ಜಾಗರಾದಿ ಅವಸ್ಥೆಗಳು ಬುದ್ಧಿಗೆ ಸೇರಿದ್ದು. ಸುಖ-ದುಃಖವೇದನೆಗಳು ಮನಸ್ಸಿಗೇ ಸೇರಿದ್ದು. ಇವುಗಳೊಂದರ ಸಂಬಂಧವೂ ಆತ್ಮನಿಗಿರುವುದಿಲ್ಲ. ಜಗತ್ತನ್ನು ಬೆಳಗುವ ಸೂರ್ಯನಂತೆ ಕೇವಲ ಸಾಕ್ಷೀ ಸ್ವಭಾವದ ನಾನು = ಆತ್ಮನು ಅಮೃತ ಸ್ವರೂಪನು ಎಂದು ನಿಶ್ಚಯಮಾಡಿಕೊಳ್ಳಬೇಕು. ಇಷ್ಟು ವಿಚಾರದಿಂದ ಆತ್ಮನು ಅನ್ನಮಯಾದಿ ಕೋಶರೂಪನಲ್ಲ. ಆ ಪಂಚಕೋಶಗಳಿಂದ ಬೇರೆಯಾಗಿಯೇ

ಇರತಕ್ಕವನು ಎಂಬ ಅಂಶವೂ ಮತ್ತು ಜಾಗರಾದಿ ಅವಸ್ಥೆಗಳಿಗೂ ತಾನು = ಆತ್ಮನು ಸಾಕ್ಷಿಯಾಗಿ ಪೃಥಕ್ಕಾಗಿ ಇರತಕ್ಕವನೆಂಬ ಅಂಶವೂ ವಿಶದವಾಗುವುದು. ಪ್ರಾಣವು ದೇಹಸ್ಥಿತಿಗೆ ಮಾತ್ರ ಕಾರಣವಾಗಿರುತ್ತದೆ. ಅದು ಅಚೇತನವೇ ಆಗಿದ್ದು ಚೇತನಾತ್ಮನಿಗೆ ದೃಶ್ಯ ವಿಷಯವೇ ಆಗಿರುತ್ತದೆ. ಅದು ಕೇವಲ ಕ್ರಿಯಾಶಕ್ತಿರೂಪವಾಗಿರುವುದು. ಅದು ಆತ್ಮನಲ್ಲ. ಆದ್ದರಿಂದ ಆತ್ಮನು ಸದಾ ಅವಿಕಾರೀ ನಿಷ್ಕ್ರಿಯನು ವ್ಯವಹಾರಾತೀತನು ಅಸಂಗನು ಶುದ್ಧನು. ಹೊಸದಾಗಿ ಹುಟ್ಟದ ಆತ್ಮನು ಆಗಮ-ಅಪಾಯಿ ಅಲ್ಲ. ಹೇಯ-ಉಪಾದೇಯ ಅಲ್ಲ. ಆತ್ಮನಲ್ಲಿ ಗುಣ ಕ್ರಿಯೆಗಳಿಲ್ಲ. ವೃದ್ಧಿ ಕ್ಷಯಗಳು ಆತ್ಮನಿಗಿಲ್ಲ. ಅವನು ನಿತ್ಯ ಸತ್ಯ ಅಚ್ಯುತನು. ಸ್ವಯಂಪ್ರಕಾಶ ಸ್ವತಸ್ಸಿದ್ಧ ಅಪ್ರಮೇಯನು. ಇಂತಹ ಪರಮಸ್ವಭಾವದ ಆತ್ಮನೇ ತಾನು ನಿತ್ಯಾನುಭವ ಸ್ವರೂಪನೆಂದು ತಿಳಿದು ನಿಶ್ಚಯ ಮಾಡಿಕೊಳ್ಳಬೇಕು. ಆತ್ಮನು ಅಜನು (ಜನ್ಮವಿಲ್ಲದವನು) ಅನಿದ್ರನು (ಅಜ್ಞಾನವಿಲ್ಲದವನು) ಅಸ್ವಪ್ನನು (ಮಿಥ್ಯಾಜ್ಞಾನವಿಲ್ಲದವನು) ಕೇವಲ ಚಿನ್ಮಯನು ಎಂದು ನಿರ್ಣಯ ಮಾಡಿಕೊಳ್ಳಬೇಕು. ಆತ್ಮನು ದೇಹೇಂದ್ರಿಯಾದ್ಯಧ್ಯಾಸವಿರುವಾಗ ಮಾತ್ರ ಪ್ರೇಕ್ಷಕ ಪ್ರಮಾತೃವಾಗಿರುತ್ತಾನೆ. ಅಂದಾಗ ಅದು ಕಲ್ಪಿತ ರೂಪವೇ = ಮಿಥ್ಯೆ ಎಂದು ನಿಶ್ಚಯ ಮಾಡಿಕೊಳ್ಳಬೇಕು. ವಿಚಾರ ವಿವೇಕ ಮಾಡಿಕೊಳ್ಳದಿರುವಾಗ ತನಗೆ ದೇಹಸಂಘಾತದೊಡನೆ ಆರೋಪ-ಅನ್ಯೋನ್ಯಾಧ್ಯಾಸವಾಗಿರುವುದರಿಂದ ನಿಜವು ತಿಳಿದಿರುವುದಿಲ್ಲ. ಆತ್ಮ ಅನಾತ್ಮ ವಿವೇಚನೆ ಮಾಡಿಕೊಂಡು ವಿವೇಕದಿಂದ ತಾನು ಬೇರೆ ಎಂದು ನಿಜಾತ್ಮನಲ್ಲೇ ನೆಲೆ ನಿಂತಾಗ ತಾನು ಸ್ವಯಂ ನಿತ್ಯ ನಿರಂಜನ ಆತ್ಮನೇ ಎಂದು ತಿಳಿಯುವುದು. ತಾನು ಕರ್ಮಕರ್ತೃವೂ ಅಲ್ಲ ಫಲಭೋಕ್ತೃವೂ ಅಲ್ಲ ಮನುಷ್ಯ ಮರ್ತ್ಯ ಅಲ್ಲ ಆತ್ಮನು ಕೇವಲ ದೃಗ್‌ರೂಪ ಸಾಕ್ಷಿ ಆಗಿರುತ್ತಾನೆ ಹೀಗೆಂದು ನಿಶ್ಚಯಮಾಡಿಕೊಳ್ಳಬೇಕು. ಇವಿಷ್ಟು ವಿಚಾರಗಳು ವಿದ್ಯಾವಿಷಯಗಳಾಗಿರುತ್ತವೆ. ವಿದ್ಯೆ ಎಂದರೆ ನಿಜವಾಗಿರುವ ವಸ್ತು ಹೇಗಿರುವುದೋ ಅದು ಇದ್ದುದು ಇದ್ದಂತೆ ಅರಿತುಕೊಂಡು ನಿಶ್ಚಯ ಮಾಡಿಕೊಳ್ಳುವುದೇ ವಿದ್ಯೆಯು. ತನ್ನ ನಿಜಸ್ಥಿತಿಯನ್ನರಿಯದಿರುವುದೇ ಅಜ್ಞಾನವು. ನಿತ್ಯ ಚೇತನನಾದ ತನ್ನನ್ನು ಮನುಷ್ಯ ದೇಹೀ ಎಂದು ತಪ್ಪಾಗಿ ತಿಳಿದುಕೊಂಡಿರುವುದೇ ಅವಿದ್ಯೆಯು.

ವಿಚಾರ ವಿವೇಕ ಮಾಡಿಕೊಂಡಿರದ ಜನರು ಹಗ್ಗವನ್ನು ಹಾವು ಎಂಬಂತೆ ತಮ್ಮನ್ನು ಮನುಷ್ಯ ಮರ್ತ್ಯ ಎಂದು ತಪ್ಪಾಗಿ ತಿಳಿದುಕೊಂಡಿರುತ್ತಾರೆ. ಅಜ್ಞಾನಿಗಳಾದ ಮೂಢರು ಆತ್ಮ ಅನಾತ್ಮರನ್ನು (ತನ್ನನ್ನೂ ದೇಹವನ್ನೂ) ಕಲಬೆರಕೆ ಮಾಡಿಕೊಂಡು ನಾನು ಹುಟ್ಟಿದ್ದೇನೆ. ನಾನು ಗಂಡು, ನಾನು ಹೆಣ್ಣು, ನಾನು ದಪ್ಪ, ನಾನು ಕೃಶ,

ಅಶಕ್ತ ಶಕ್ತ, ಬುದ್ಧಿವಂತ, ದಡ್ಡ ಕರ್ತಾ, ಭೋಕ್ತಾ ಸುಖೀ ದುಃಖೀ, ಮರ್ತ್ಯ, ಸಂಸಾರೀ ಜೀವಾತ್ಮಾ ಎಂಬೀರೀತಿ ಪ್ರಮಾಣವಿಲ್ಲದೇ ತಿಳಿದುಕೊಂಡು ಅದನ್ನೇ ನಂಬಿಕೊಂಡಿರುತ್ತಾರೆ. ಮತ್ತು ಆಯಾಯಾ ಕಾಲಕ್ಕೆ ಅಂದರೆ ನೋಡುವಾಗ ಕಣ್ಣೇ ನಾನು. ಕೇಳುವಾಗ ಕಿವಿಯೇ ನಾನು. ತಿಳಿಯುವಾಗ ಬುದ್ಧಿಯೇ ನಾನು. ಬಾಲ್ಯ ಮತ್ತು ಮುದುಕನಾದಾಗ ದೇಹವೇ ನಾನು. ಬದುಕಿರುವಾಗ ಪ್ರಾಣವೇ ನಾನು. ಹೀಗೆಂದು ಆಯಾಯಾ ಕಾಲಕ್ಕೆ ತಮ್ಮ ಸ್ವರೂಪವನ್ನು ಕಲ್ಪಿಸಿಕೊಂಡು, ತಮ್ಮ ಸ್ವರೂಪನಿಶ್ಚಯವಿಲ್ಲದೇ ಬಾಹ್ಯ ವ್ಯವಹಾರದಲ್ಲೇ ಮುಳುಗಿರುತ್ತಾರೆ. ತಾನು ಜೀವಾತ್ಮಾ ಎಂದು ತಿಳಿದುಕೊಂಡು ಭ್ರಾಂತರಾಗಿರುತ್ತಾರೆ. ತಮ್ಮ ಆತ್ಮನನ್ನೇ ಅರಿಯದೇ ಮರೆತಿರುತ್ತಾರೆ. ಆದ್ದರಿಂದಲೇ ಜನರು ಶೋಕ ಮೋಹ ಚಿಂತೆ ಭಯಾದಿ ಕ್ಲೇಶಗಳನ್ನು ಅನುಭವಿಸುತ್ತಾರೆ. ಚಿಂತಾಭಾರದಿಂದ ಕಳವಳಗೊಂಡಿರುತ್ತಾರೆ ಅಶಾಂತಿಯಿಂದಿರುತ್ತಾರೆ. ಇದೇ ಸಂಸಾರ ಬಂಧನ. ಇದೇ ಅಧ್ಯಾರೋಪವು. ಇದಕ್ಕೆ ಅಪವಾದವು ಇಂತಿರುವುದು –

ಅರಿಯುವ ಶಕ್ತಿಯುಳ್ಳ ನಾನು = ಚಿನ್ಮಯ ಆತ್ಮನು. ಈ ಲೋಕಕ್ಕೂ ಈ ವ್ಯವಹಾರಕ್ಕೂ ಸಂಬಂಧಪಟ್ಟವನಲ್ಲ. ಜಡವಾದ ದೇಹೇಂದ್ರಿಯಾದಿಗಳು ನಾನಲ್ಲ, ಅದು ನನ್ನ ಸ್ವರೂಪವಲ್ಲ. ನಾನು ಮರ್ತ್ಯನಲ್ಲ. ನಿತ್ಯ ಸತ್ಯ ಆತ್ಮನು. ನಾಮರೂಪ ಇಲ್ಲದವನು. ಕೇವಲ ಚೈತನ್ಯ ಸ್ವಭಾವದ ನಾನು ನಿತ್ಯಸಾಕ್ಷಿ ಮಾತ್ರ. ಈ ಶುದ್ಧ ಪ್ರತ್ಯಗಾತ್ಮನು ಆಕಾಶದಂತೆ ಅಸಂಗ. ಪರಿಪೂರ್ಣವ್ಯಾಪ್ತನಾಗಿರತಕ್ಕವನು. ಮನುಷ್ಯಾದಿ ಸಕಲ ಪ್ರಾಣಿಗಳಲ್ಲೂ ಈ ಚೈತನ್ಯವೇ ಜೀವಾತ್ಮನು = ಅರಿಯುವ ಸತ್ಯಚೇತನನು. ಈ ಸರ್ವಾತ್ಮನು ನಿತ್ಯ ಶುದ್ಧ ಬುದ್ಧ ಮುಕ್ತ ಪರಮಾತ್ಮನಾಗಿದ್ದಾನೆ. ಒಬ್ಬನೇ ಆತ್ಮನಿರುವನು. ಅನೇಕ ಆತ್ಮರಿರುವುದಿಲ್ಲ. ಸರ್ವರ ಆತ್ಮನೂ ಒಬ್ಬನೇ. ಆತ್ಮೈಕ್ಯವೇ ವೇದಪ್ರತಿಪಾದಿತ ಸಿದ್ಧಾಂತವಾಗಿರುತ್ತದೆ. (ಏಕೋದೇವಸ್ಸರ್ವಭೂತೇಷು ಗೂಢಃ॥ ಅಹಮಸ್ಮಿ ಬ್ರಹ್ಮಾಹಮಸ್ಮಿ॥ ನೇಹನಾನಾಸ್ತಿಕಿಂಚನ ಇವು ಉಪನಿಷತ್ ಪ್ರಮಾಣ) ಇಂತಹ ಲೋಕೋತ್ತರ ತತ್ತ್ವವಾದ ಪರಮಾತ್ಮನನ್ನು ಅರಿತುಕೊಂಡರೆ, ಮನುಷ್ಯನು ತನ್ನ ನಿಜಸ್ವರೂಪವನ್ನು ಅರಿತರೆ ಅವನಿಗೆ ಈ ಸಂಸಾರ ಬಂಧನದಿಂದ ಬಿಡುಗಡೆಯಾಗುವುದೆಂದು, ಅವನು ಮುಕ್ತನೆಂದು ನಮ್ಮ ಭಾರತೀಯ ಅಧ್ಯಾತ್ಮ ತತ್ತ್ವಶಾಸ್ತ್ರದ ಅಮೋಘ ಉಪದೇಶವಾಗಿದೆ. ಶಾಂತಿಯಿಂದಿರಲು ಇದೇ

ಉಪಾಯವಾಗಿರುತ್ತದೆ. ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ಕುರುತೇ = ಗೀತಾಚಾರ್ಯ ವಚನ. ಆತ್ಮಾನಮೇವಂ ವಿದ್ವಾನಮೃತ ಇಹಭವತಿ = ಶ್ರುತಿ ವಚನ. ಇಂತಹ ಪರಮಪುರುಷಾರ್ಥವು ಬೇರೆ ಎಂತಹ ಶ್ರೇಷ್ಠ ಧರ್ಮಕರ್ಮಗಳಿಂದಲೂ ದೊರೆಯುವುದಿಲ್ಲ. ಮುಕ್ತನಿಗೆ ಪುನಃ ಜನ್ಮವುಂಟಾಗುವುದಿಲ್ಲ. ಈ ಜ್ಞಾನವು ಬೇರೆ ಮತಗ್ರಂಥಗಳಲ್ಲಿ ಸಿಕ್ಕುವುದಿಲ್ಲ. ಬೇರೆ ಶಾಸ್ತ್ರಗಳಿಂದಲೂ ತಿಳಿಯುವುದಿಲ್ಲ.

ಇಂತಿರುವ ಅತ್ಯಂತ ಗೂಢಗಂಭೀರ ಪರಮಾರ್ಥ ಸತ್ಯವಿಚಾರವನ್ನು ಪದೇ ಪದೇ ಮನನ ಮಾಡಿಕೊಳ್ಳುತ್ತಾ ನಿಶ್ಚಯಜ್ಞಾನ ಮಾಡಿಕೊಳ್ಳಬೇಕು ಅನುಭವಿಸಬೇಕು. ಈ ಆತ್ಮನು ಸ್ವಯಂಪ್ರಕಾಶ ಸ್ವಯಂಸಿದ್ಧ = ನಿತ್ಯ ಶುದ್ಧ ಬುದ್ಧ ಮುಕ್ತ ಸ್ವಭಾವ, ಪೂರ್ವಭವ, ಅಪ್ರಮೇಯ. ಅಂದರೆ ಪ್ರಮಾಣವನ್ನು ಹಿಡಿಯುವುದಕ್ಕೆ ಮೊದಲೇ ಸಿದ್ಧನಾಗಿರುವನು. ಆದ್ದರಿಂದ ಆತ್ಮನು ಪ್ರಮಾತೃ ರೂಪನಲ್ಲ. ಕರ್ತೃವೂ ಅಲ್ಲ. ಭೋಕ್ತೃವೂ ಅಲ್ಲ. ಜಾಗರ ಸ್ವಪ್ನ ಮತ್ತು ಜಗತ್‌ಸೃಷ್ಟಿಮೊದಲಾದ ಸಮಸ್ತಕ್ಕೂ ಪೂರ್ವಭವನೇ ಆಗಿರುತ್ತಾನೆ (ಅಂದರೆ ಸುಷುಪ್ತಿ ಸ್ಥಿತಿಯ ಕೈವಲ್ಯವನ್ನು ನೆನೆಯಬೇಕು) ಇಂತಹ ಪರಮ ಸ್ವಭಾವದ ನಿರಂಜನ ಆತ್ಮನು ನಾನು ಎಂದು ನಿರ್ಣಯಮಾಡಿಕೊಂಡು ಬಳಿಕ ಈಗ ಮೂರನೆಯ ವಾಕ್ಯದ ಅರ್ಥವನ್ನು ಚಿಂತಿಸೋಣ –

೩. ಅಯಮಾತ್ಮಾ ಬ್ರಹ್ಮ = ಏಕಮೇವಾದ್ವಿತೀಯಂ. ಈ ಆತ್ಮನು ಬ್ರಹ್ಮವೇ (ಪರಮಾತ್ಮನೇ). (ಬೇರೆ ಏನೂ ಅಲ್ಲ, ಬೇರೆ ಏನೂ ಇಲ್ಲ) ಹೀಗೆಂಬುದು ಉಪನಿಷತ್ ರಹಸ್ಯೋಪದೇಶವಾಗಿರುತ್ತದೆ. ರಹಸ್ಯ ಎಂದರೆ ಗುಟ್ಟು ಎಂದರ್ಥ. ಇದು ಏಕೆ ಗುಟ್ಟು ಎಂದರೆ – ಈ ವಿಷಯವು ಎಲ್ಲಿಂದರೆ ಅಲ್ಲಿ – ಪೇಟೆ ಸಂತೆಗಳಲ್ಲಿ ದೊರೆಯುವುದಿಲ್ಲ. ಮನುಷ್ಯನಿಗೆ ಸ್ವತಃ ತಿಳಿಯುವುದಿಲ್ಲ. ಅವನ ಮನ ಆದಿ ಜ್ಞಾನಸಾಧನಗಳು ಈ ವಿಚಾರವನ್ನು ತಿಳಿಸಿಕೊಡಲಾರವು. ನವನವೀನವಾದ ಯಾವ ಶಾಸ್ತ್ರಗಳಲ್ಲೂ ಮತಗ್ರಂಥಗಳಲ್ಲೂ ಈ ವಿಚಾರ ಸಿಕ್ಕುವುದಿಲ್ಲ. ಬಲ್ಲವರು ತಿಳಿಸಿಕೊಟ್ಟಾಗಲೇ ತಿಳಿಯುವಂತಹ ವಿಚಾರವಿದು. ಆದ್ದರಿಂದಲೇ ಗುಟ್ಟು ಎನ್ನಲಾಗುತ್ತದೆ. ಇಂತು ಲೋಕದ ಜನರಿಗೆ ತಿಳಿಯದಿರುವ ಪರಮಾರ್ಥ ಸತ್ಯವಾದ, ಅತ್ಯಂತ ಹಿತಕರವಾದ ಮತ್ತು ಅನುಭವ ಗೋಚರವಾಗುವ ವಿಷಯವನ್ನು ಶ್ರೀವೇದಮಾತೆಯು ಉಪದೇಶಿಸಿರುವ ಮಾತು ಏನೆಂದರೆ – ಈ ಆತ್ಮನು ಬ್ರಹ್ಮವೇ

ಎಂದರೆ ನಿತ್ಯ ಶುದ್ಧ ಬುದ್ಧ ಮುಕ್ತ ಸ್ವಭಾವ ಎಂದು ತಿಳಿಸಿಕೊಡುತ್ತಿದೆ. ಈ ವಾಕ್ಯದ ಅರ್ಥ ವಿವರಣೆಯನ್ನು ತಿಳಿಯೋಣ.

ಆತ್ಮಾ ಎಂಬ ಶಬ್ದ ಶಬ್ದಾರ್ಥವು ಅಲೌಕಿಕವೆಂದು ಮೇಲೆ ಪ್ರತಿಪಾದಿ ಸಿರುತ್ತೆ, ಹಾಗೆಯೇ ಬ್ರಹ್ಮ ಎಂಬ ಶಬ್ದ ಶಬ್ದಾರ್ಥವೂ ಲೋಕೋತ್ತರವಾಗಿರುವು ದೆಂದು ತಿಳಿಯಬೇಕು. ಆದ್ದರಿಂದ ಅದನ್ನೇ ಮೊದಲು ವಿಚಾರಪೂರ್ವಕ ನಿಶ್ಚಯಮಾಡಿಕೊಳ್ಳುವುದು ಉಚಿತವಾಗಿದೆ. ಬೃಹಿ ಎಂಬ ಧಾತುವಿನಿಂದ ಬ್ರಹ್ಮ ಶಬ್ದವು ಉಂಟಾಗಿದೆ. ಆ ಬೃಹಿ ಧಾತುವಿಗೆ ವೃದ್ಧಿ ಎಂಬ ಅರ್ಥವಿರುತ್ತದೆ. ವೃದ್ಧಿ ಎಂದರೆ ದೊಡ್ಡದಾಗಿ ಬೆಳೆದುಕೊಂಡಿರುವುದು ಎಂದರ್ಥ. ಈ ಅರ್ಥಕ್ಕೆ ಸ್ವಲ್ಪವೂ ಸಂಕೋಚ ಮಾಡದೇ ಪೂರ್ಣ ಸಂಪೂರ್ಣಾರ್ಥವನ್ನು ಗ್ರಹಿಸಿದಾಗ ಬ್ರಹ್ಮಶಬ್ದಕ್ಕೆ ಎಲ್ಲಾ ಪ್ರಕಾರದಿಂದಲೂ ದೊಡ್ಡದು ಎಂದರ್ಥವಾಗುವುದು. ಅಂದರೆ ದೇಶ, ಕಾಲ, ವಸ್ತು ಪರಿಚ್ಛೇದವಿಲ್ಲದ ಅಪರಿಮಿತ = ಮೇರೆ ಮಿಗಿಲಿಲ್ಲದ ಚೈತನ್ಯವಸ್ತು ಎಂದು ತಿಳಿಯುವುದು. ಅಂದಾಗ ಆದಿ ಅಂತ್ಯ ಇಲ್ಲದ ಆ ಬ್ರಹ್ಮ ವಸ್ತುವು ಧರ್ಮ, ಜಾತಿ, ಗುಣ, ಕ್ರಿಯಾ, ಸಂಜ್ಞೆ, ಸಂಬಂಧ, ಈ ವಿಶೇಷವೇನೂ ಇಲ್ಲದ್ದೆಂದೂ, ಸಜಾತೀಯ ವಿಜಾತೀಯ ಸ್ವಗತ ಭೇದ ಇಲ್ಲದುದು ಎಂದೂ ನಿರ್ಣಯ ಮಾಡಿಕೊಳ್ಳಬೇಕು. ಇಂತಹ ವಸ್ತುವನ್ನು ಮಾತಿನಿಂದ ಹೇಳಿ ತಿಳಿಸಲಾಗದುದರಿಂದ ಅತ್ಯಂತ ಪೂಜ್ಯತಮ ವಸ್ತುವೆಂದು ಸೂಚಿಸುವ ತುಂಬತುಂಬಾ ದೊಡ್ಡವನು ಎಂಬಂತೆ, ಅರ್ಥವಾಗುವಂತೆ ಬ್ರಹ್ಮಶಬ್ದದಿಂದ ನಿರ್ದೇಶಿಸುವರು. ಅದು ಪರಮಪೂಜ್ಯವಾದುದರಿಂದಲೇ ಆ ಮಹಾವಸ್ತುವು ದಿವ್ಯಚೇತನ = ಚಿತ್‌ಸ್ವರೂಪ = ಸ್ವಯಂಪ್ರಕಾಶ ಸ್ವಾನುಭವಸಿದ್ಧ ಅಜ ಅನಿದ್ರ ಅಸ್ವಪ್ನ ವಸ್ತು ಎಂದೂ ತಿಳಿಯುವುದು. ಚೇತನ ಎಂದರೆ ಚೈತನ್ಯಘನಸ್ವರೂಪ = ಚಿಚ್ಛಕ್ತಿಪೂರ್ಣ ಎಂದರ್ಥ. ಹೀಗೆ ಚಿಚ್ಛಕ್ತಿಪೂರ್ಣವಾಗಿ ಸ್ವಯಂಪ್ರಕಾಶವಾಗಿರುವುದರಿಂದಲೇ ಅದು ಮನುಷ್ಯನ ಅನುಭವಕ್ಕೆ ಸಿಕ್ಕುವಂತಹ ವಸ್ತು ಎಂದೂ ಹೇಳಿದಂತಾಯಿತು. ಅಂದಾಗ ಆ ಬ್ರಹ್ಮ ವಸ್ತುವು ನಿತ್ಯ ಶುದ್ಧ ಬುದ್ಧ ಮುಕ್ತ ಸ್ವಭಾವದ್ದೇ ಆಗಿರುವುದೆಂದು ನಿರ್ಣಯವಾಗುವುದು. ಹಾಗಿರದಿದ್ದರೆ ಬ್ರಹ್ಮಶಬ್ದವು ಅನ್ವರ್ಥವಾಗಲಾರದು. ಹೀಗೆ ಶಬ್ದಾರ್ಥಾನ್ವಯಪ್ರಕಾರ ಆ ಬ್ರಹ್ಮವಸ್ತುವು ಚೈತನ್ಯಪೂರ್ಣ ಚೇತನ, ಸ್ವಯಂಪ್ರಕಾಶ, ಸ್ವಾನುಭವಸಿದ್ಧ, ಅನಾದ್ಯನಂತ, ಅದ್ವಿತೀಯ, ಅಪರಿಚ್ಛಿನ್ನ ಸರ್ವಸ್ವತಂತ್ರ, ನಿರತಿಶಯಮಹಾನ್,

ಸ್ಮರನ್ತಿ ಸಾಧವೋ ನಿತ್ಯಂ ಬೋಧಯನ್ತಃ ಪರಸ್ಪರಂ।
ಕಥಯನ್ತಶ್ಚ ಮಾಂ ಭಕ್ತ್ಯಾ ತುಷ್ಯನ್ತಿ ಚ ರಮನ್ತಿ ಚ ॥



ಪರಮಾರ್ಥ, ನಿರ್ವಿಕಾರ, ನಿರಪೇಕ್ಷ ಸತ್ಯ, ಸರ್ವಜ್ಞ, ಸರ್ವಶಕ್ತ, ಸರ್ವವ್ಯಾಪಕ, ನಿತ್ಯ ನಿರ್ಮಲ ವಸ್ತು ಎಂದರ್ಥವಾಗವುದಲ್ಲದೇ ಅದು ಅಪ್ರಮೇಯ, ಸಾಕ್ಷಾದಪರೋಕ್ಷ ವಸ್ತು ಎಂದೂ ಸಿದ್ಧವಾಗುವುದು. ಇಷ್ಟು ಮಾತ್ರವೇ ಅಲ್ಲ. ಈ ಮಹಾನ್ ವಸ್ತುವು ಅದ್ಭುತ ಮಹಿಮೆಯುಳ್ಳದ್ದು - ಅಂದರೆ ಇಂದಿನ ಮತ್ತು ಕಾಲಕಾಲಾಂತರಗಳಲ್ಲಿ, ಲೋಕ ಲೋಕಾಂತರಗಳಲ್ಲಿ ಇದ್ದಿರಬಹುದಾದ ಮಹಾಸಾಧಕರು. ಯೋಗಿ ಯೋಗೀಶ್ವರರು, ಮಹಾಭಕ್ತರು, ಉಪಾಸಕರು, ಮಹಾಮೇಧಾವಿಗಳು ತಮ್ಮ ಶ್ರೇಷ್ಠ ಜ್ಞಾನಕರ್ಮಸಾಧನೆಗಳಿಂದ ಎಂತೆಂತಹ ಕ್ರಿಯಾಸಿದ್ಧಿ, ಯೋಗಸಿದ್ಧಿ, ತಪಸ್ಸಿದ್ಧಿ, ಜ್ಞಾನಸಿದ್ಧಿ, ಮಂತ್ರಸಿದ್ಧಿಗಳನ್ನು ಗಳಿಸಿಕೊಂಡಿರಬಹುದೋ ಅಂತಹ ಅಥವಾ ಅವಕ್ಕೂ ಹೆಚ್ಚಿನ ಸಕಲ ಸಿದ್ಧಿಗಳನ್ನೂ ಸ್ವಭಾವದಿಂದಲೇ ಅಂದರೆ ಪ್ರಯತ್ನವಿಲ್ಲದೇ ಹೊಂದಿರುವಂತಹ ಮಹಾಮಹಿಮಾನ್ವಿತವಾದ ವಸ್ತು ಎಂದೂ ಶಬ್ದ ತಾತ್ಪರ್ಯವಾಗಿರುತ್ತದೆ. ಇಂತಹ ವಿಶೇಷವಿಲ್ಲದಿದ್ದರೆ ಬ್ರಹ್ಮಶಬ್ದಕ್ಕೆ ಅರ್ಥವೇ ಪೂರ್ಣವಾಗುವುದಿಲ್ಲ. ಅಂದಾಗ ಬ್ರಹ್ಮ ಎಂದರೆ ಪರಮೇಶ್ವರ, ಭಗವಾನ್, ಅರ್ಥಾತ್ ನಿರತಿಶಯಮಹಾನ್, ವಸ್ತುಸ್ವಭಾವದಿಂದಲೇ ನಿತ್ಯಸತ್ಯವಾಗಿ ಜ್ಞಾನಾನಂದೈಶ್ವರ್ಯವೀರ್ಯಕೀರ್ತಿತೇಜಃ ಪರಿಪೂರ್ಣ = ಷಡ್ಗುಣೈಶ್ವರ್ಯಸಂಪನ್ನ ಎಂಬ ಮಹತ್ವಪೂರ್ಣಾರ್ಥವು ಸಮನ್ವಿತವಾಗಿರುವುದು. ಇಂತಹ ಅಜ ಅನಿದ್ರ ಅಸ್ವಪ್ನ ಚೈತನ್ಯ ವಸ್ತುವನ್ನೇ ಸರ್ವಶಕ್ತಿಪೂರ್ಣ ಮಹಿಮಾನ್ವಿತನನ್ನೇ ಸರ್ವಸ್ವತಂತ್ರನನ್ನೇ ದೇವರು, ಪರಮಾತ್ಮ ಎಂದು ಶಾಸ್ತ್ರಗಳು ತಿಳಿಸಿಕೊಡುತ್ತಿರುವುವು. (ಈ ಪರಿ ವಿಶೇಷ ಆಲೋಚನೆಯೇ ಭಗವದ್ಭಕ್ತಿ ಎಂದು ತಿಳಿಯಬೇಕು ಮತ್ತು ಹೀಗೆ ಅರಿತು ಭಗವಂತನಲ್ಲಿ ಅನುರಕ್ತಿಯಿಂದ ಭಜಿಸುವುದೇ ಮತ್ತು ಅವನನ್ನು ಅರಿಯುವುದೇ ಭಕ್ತಿಯಾಗಿರುತ್ತದೆ.)

ಹೀಗೆ ಬ್ರಹ್ಮಶಬ್ದದ ಅರ್ಥವನ್ನು ತಿಳಿದುಕೊಂಡು ನಿಶ್ಚಯವಾದ ಬಳಿಕ ಈಗ ಮೊದಲು ಹಿಂದೆ ವಿವರಿಸಿರುವುದನ್ನು, ಅಂದರೆ ನಾನು = ತಾನು ಎಂಬ ಪ್ರತ್ಯಗಾತ್ಮ ಸ್ವರೂಪವನ್ನು ಜ್ಞಾಪಿಸಿಕೊಳ್ಳಬೇಕು. ಹಾಗೆ ಸ್ಮರಣೆಗೆ ತಂದುಕೊಂಡಾಗ ಆತ್ಮವಸ್ತುವೂ ಬ್ರಹ್ಮವಸ್ತುವೂ ಒಂದೇ. ಬೇರೆ ಬೇರೆ ಅಲ್ಲ ಎಂದೇ ತಿಳಿಯುವುದು ಏಕೆಂದರೆ - ಪರಿಪೂರ್ಣಚೈತನ್ಯ, ನಿರಪೇಕ್ಷ ಸತ್ಯ, ಸ್ವಯಂಪ್ರಕಾಶ ಚಿಚ್ಛಕ್ತಿಪೂರ್ಣ ಚೇತನ, ಅದ್ವಿತೀಯ, ಅಪರಿಚ್ಛಿನ್ನ, ನಿರತಿಶಯ ಮಹಾನ್, ನಿತ್ಯ ನಿರ್ಮಲ, ಅನಂಗ ಜ್ಞಾನ ಪ್ರಕಾಶ

ಸ್ವರೂಪ, ಅಪ್ರಮೇಯ ಸಾಕ್ಷಾದಪರೋಕ್ಷ ಸ್ವಾನುಭವಸಿದ್ಧ ಅನಾದಿ ಅನಂತ ಎಂಬ ಎಲ್ಲಾ ವಸ್ತುಸ್ವರೂಪಲಕ್ಷಣಗಳೂ ಸಮಸಮಾನ ಒಂದೇ ಆಗಿರುವುದರಿಂದ ಬ್ರಹ್ಮ- ಆತ್ಮಾ ಒಂದೇ ಅಖಂಡವಸ್ತು. ಸಚ್ಚಿದಾನಂದವೆಂಬ ಸಾಕ್ಷಾದಪರೋಕ್ಷವಾದ ಅದ್ವೈತವಸ್ತುವೇ ನಿತ್ಯ-ಸತ್ಯ ಎಂಬ ಪರಮಾರ್ಥತತ್ತ್ವವು ಸಿದ್ಧಿಸುವುದು. ಹೀಗೆ ನಾನು ನಿಜಾತ್ಮನು ಬ್ರಹ್ಮವೇ = ನಿತ್ಯ ಶುದ್ಧ ಬುದ್ಧ ಮುಕ್ತ ಸ್ವಭಾವ ಎಂದು ಅರಿತುಕೊಳ್ಳಬೇಕು. ನಿಶ್ಚಯಾನುಭವ ಮಾಡಿಕೊಳ್ಳಬೇಕು. ಇಂತು ತನ್ನ ಆತ್ಮಚೈತನ್ಯವನ್ನು ಇದ್ದಂತೆ ಅರಿಯುವುದೇ ಸಮ್ಯಗ್ ಜ್ಞಾನ. ಅದೇ ಮೋಕ್ಷ. ಮೋಕ್ಷ ಎಂದರೆ ಹೊಸದಾಗಿ ಸಂಪಾದಿಸಿಕೊಳ್ಳುವುದಲ್ಲ. ಮುಕ್ತಿರ್ಹಿತ್ವಾಽನ್ಯಥಾಭಾವಂ ಸ್ವರೂಪೇಣ ವ್ಯವಸ್ಥಿತಿಃ ಎಂದೇ ಶಾಸ್ತ್ರವು ತಿಳಿಸುವುದು. ವಿಕಾರ ಭಾವವನ್ನು ಬಿಟ್ಟು ತನ್ನ ಸ್ವರೂಪ ಸ್ಥಿತಿಯನ್ನು ಹೊಂದುವುದೇ ಮೋಕ್ಷವಾಗಿರುತ್ತದೆ.

ಶ್ರೀ ವೇದಮಾತೆಯ ಈ ಉಪದೇಶದಂತೆ ನಾನು ಆತ್ಮನು ಅದ್ವಿತೀಯ ಬ್ರಹ್ಮವೇ ಎಂದು ತಿಳಿದುಕೊಂಡಾಗ ಮನುಷ್ಯನಿಗೆ ಸಂದೇಹವುಂಟಾಗಬಹುದು. ಈ ಬಾಹ್ಯದಲ್ಲಿ ನಾನಾಭೇದಗಳು. ಜಗದ್ವಸ್ತುಗಳು, ಜಾತಿ ವ್ಯಕ್ತಿಗಳು, ಅನುಭವವೇದನೆಗಳು ತೋರುತ್ತಿರಲು ಅದ್ವೈತವೇ ಪರಮಾರ್ಥ ಎಂಬುದು ಹೇಗೆ ಸಮಂಜಸ? ಹೀಗೆಂಬ ಆಕ್ಷೇಪರೂಪ ಸಂದೇಹಕ್ಕೆ ಸಮಾಧಾನ - ಉತ್ತರವಾಗಿ ಈಗ ಈ ನಾಲ್ಕನೆಯ ವಾಕ್ಯವು ಇರುವುದು. ಇದೂ ರಹಸ್ಯೋಪದೇಶವೇ. ಏಕೆಂದರೆ ಮನುಷ್ಯನಿಗೆ ಈ ವಿಷಯಗಳು ಸ್ವತಃ ತಿಳಿಯುವುದಿಲ್ಲ. ತತ್ತ್ವವನ್ನರಿತವರು ತಿಳಿಸಿಕೊಟ್ಟಾಗಲೇ ಗೊತ್ತಾಗುವುದು. ಈಗ ಈ ನಾಲ್ಕನೆಯ ವಾಕ್ಯದ ಅರ್ಥವನ್ನು ವಿಚಾರಮಾಡಿ ತಿಳಿದುಕೊಳ್ಳೋಣ.

೪. ಸರ್ವಂ ಖಲ್ವಿದಂ ಬ್ರಹ್ಮ = ಇಲ್ಲಿ ಜ್ಞಾನಗೋಚರವಾಗುವುದೆಲ್ಲವೂ ಪರಮಾರ್ಥವಾಗಿ ಅದ್ವೈತ ಬ್ರಹ್ಮವೇ ಆಗಿರುತ್ತದೆ ಬೇರೆ ವಸ್ತು ಯಾವುದೂ ಇರುವುದಿಲ್ಲ ಎಂದು ಈ ವಾಕ್ಯದ ಅರ್ಥವಾಗಿದೆ. ಅಂದರೆ ನಮ್ಮ ಸರ್ವರ ಆತ್ಮನನ್ನೂ ಸೇರಿಸಿಕೊಂಡು ಈ ಚರಾಚರ ಜಗತ್ತೆಲ್ಲವೂ = ನಾಮರೂಪವುಳ್ಳ ಸಕಲ ವಿಶ್ವವೂ ಬ್ರಹ್ಮವೇ ಆಗಿದೆ ಎಂದು ಉಪದೇಶವಾಗಿದೆ. ಅರಿಯುವ ಚೇತನವು ಒಂದೇ ಇರುವುದು. ಅನೇಕ ಚೇತನ ವಸ್ತುವಿಲ್ಲ. ಅನಾತ್ಮವು ಏನನ್ನೂ ಅರಿಯುವುದಿಲ್ಲ. ಎಂದು ಹಿಂದೆ ಪ್ರತಿಪಾದಿಸಿರುವುದನ್ನು ಮತ್ತು ಅರಿಯುವ ಶಕ್ತಿಯುಳ್ಳ ನಮ್ಮ ಪ್ರತ್ಯಗಾತ್ಮನು

ನಿತ್ಯ ದೃಗ್‌ರೂಪ ಸಾಕ್ಷೀ ಚೈತನ್ಯಮಾತ್ರ ಎಂಬುದನ್ನು ಸದಾ ಜ್ಞಾಪಕದಲ್ಲಿಟ್ಟುಕೊಂಡು ವಿಚಾರವನ್ನು ಗ್ರಹಿಸಬೇಕು.

ಈ ಉಪದೇಶ ವಾಕ್ಯದ ಅರ್ಥವನ್ನು ತಿಳಿಯಲು ಮೊದಲು ಕೆಲವು ಅಂಶಗಳನ್ನು ತಿಳಿದುಕೊಂಡಿರಬೇಕಾದ್ದು ಆವಶ್ಯಕವಾಗಿರುತ್ತದೆ. ಸುಲಭವಾಗಿ ತಿಳಿಯುವುದಿಲ್ಲ. ಆದ್ದರಿಂದ ಈಗ ಆ ಅಂಶಗಳನ್ನೇ ವಿಚಾರ ಮಾಡಿಕೊಳ್ಳೋಣ. ಮನುಷ್ಯಾದಿ ಸಕಲ ಪ್ರಾಣಿಗಳು ಅನುಭವಿಸುವ ಅವಸ್ಥಾತ್ರಯ ಎಂಬ ಪ್ರಮೇಯ, ಈ ಜಗತ್ತಿನ ಉತ್ಪತ್ತಿ ಸ್ಥಿತಿ ಪ್ರಳಯ ಎಂಬ ಪ್ರಬಂಧ. ಪ್ರಪಂಚದ ಪ್ರತಿ ವಸ್ತುವಿನಲ್ಲೂ ಸಂಭವಿಸಿಕೊಂಡಿರುವ ಕಾರ್ಯಕಾರಣಭಾವ. (ಅದನ್ನು ನಿರೂಪಿಸುವ ಪರಿಣಾಮವಾದ ಎಂಬ ಮತ ಮತ್ತು ವಿವರ್ತವಾದದ ಎಂಬ ಮತ). ಈ ಪ್ರಕ್ರಿಯೆಗಳನ್ನು ಅನುಸರಿಸಿ ವಿಚಾರಮಾಡಿಕೊಂಡರೆ, ಈ ಕ್ರಮದಲ್ಲಿ ವಿವೇಚಿಸಿ ಹುಡುಕಿಕೊಂಡರೆ ಸರಿಯಾದ ವಿವೇಕ ಜ್ಞಾನಲಾಭವಾಗುವುದು. ಆಗ ಜಗತ್ಸಾರವಾದ ಪರಮಾರ್ಥ ಸತ್ಯವಸ್ತುವು ಸಿಕ್ಕುವುದು. ನಿಶ್ಚಯಜ್ಞಾನವೂ ಆಗುವುದು.

ಪರಿಣಾಮವಾದ (ನ್ಯಾಯದ ಪ್ರಕಾರ) ಕಾರ್ಯವು ಕಾರಣದ ವಿಕಾರಮಾತ್ರವಾಗಿದ್ದು ಬೇರೆ ಸ್ವತಂತ್ರ ವಸ್ತುವಾಗಿರುವುದಿಲ್ಲ. ಕಾರಣವಸ್ತುವೇ ಸತ್ಯ. ಅಂದಾಗ ಬ್ರಹ್ಮಕಾರ್ಯಗಳೆಲ್ಲವೂ ಕಾರಣಬ್ರಹ್ಮಮಾತ್ರವೇ ಆಗಿರುತ್ತವೆ. ವಿವರ್ತವಾದ (ನ್ಯಾಯದ ಪ್ರಕಾರ) ಆರೋಪವೆಲ್ಲವೂ ಕಲ್ಪಿತವಾದ್ದರಿಂದ ಆ ಕಲ್ಪನೆಗೆ ಅಧಿಷ್ಠಾನವಾದ ಬ್ರಹ್ಮವೇ ಸತ್ಯವಾಗಿರುವುದರಿಂದ ಸರ್ವಂ ಖಲ್ವಿದಂ ಬ್ರಹ್ಮ ಎಂದೇ ನಿಶ್ಚಯವಾಗುವುದು.

ಅವಸ್ಥಾತ್ರಯವೆಂದರೆ, ಸಾರ್ವತ್ರಿಕವಾಗಿ ಅನುಭವದಲ್ಲಿರುವುದು. ಇದು ಬುದ್ಧಿಗೆ ಸೇರಿದ್ದು (ಈಗ ಇದು ಎಚ್ಚರ ಆಗ ಆದದ್ದು ಸ್ವಪ್ನ ಏನನ್ನೂ ಆಗ ಅರಿಯದೇ ಇದ್ದುದು ಅದು ನಿದ್ದೆ ಎಂದು ಮನುಷ್ಯನಿಗೆ ತಿಳಿಯುತ್ತಿರುತ್ತದಷ್ಟೆ. ಅಂದರೆ ಅವಕ್ಕೆ ಮನುಷ್ಯನು ತಾನೇ ಸಾಕ್ಷಿ ಆಗಿರುತ್ತಾನೆ. ಆದ್ದರಿಂದ ಕಾಲಕ್ಕೆ ಒಳಪಟ್ಟ ಆ ಅವಸ್ಥೆಗಳು ಆತ್ಮನಿಗೆ ಸೇರಿದ್ದಲ್ಲ. ಬುದ್ಧಿಗೇ ಸೇರಿದ್ದು). ಜಾಗ್ರದವಸ್ಥೆ, ಸ್ವಪ್ನಾವಸ್ಥೆ ಮತ್ತು ಸುಷುಪ್ತ್ಯವಸ್ಥೆ ಎಂದು ಇವು ಮೂರು ಅವಸ್ಥೆಗಳು. ಬುದ್ಧಿಪರಿಣಾಮವಾದ ಈ ಮೂರು ಕಾಲಭೇದವಾದ ಅವಸ್ಥೆಗಳಲ್ಲಿ ಒಂದು ಇರುವಾಗ ಮತ್ತೊಂದು ಕಾಲದ ಅವಸ್ಥೆಯು ಎಲ್ಲಿಯೂ ಇರುವುದೇ ಇಲ್ಲ. (ಆಯಾಯಾ ಅವಸ್ಥೆಯಲ್ಲಿರುವ

ವ್ಯಕ್ತಿಯ ದೃಷ್ಟಿಯಲ್ಲಿ) ಹೀಗೆಂಬುದನ್ನು ಗಮನಿಸಿದಾಗ ಆ ವ್ಯಕ್ತಿಯ ದೃಷ್ಟಿಯಿಂದ ಇವು ಒಂದೊಂದು ಅವಸ್ಥೆಯೂ ಬೇರೆ ಬೇರೆ ಲೋಕವೆಂದೋ, ಬೇರೆ ಬೇರೆ ಬ್ರಹ್ಮಾಂಡವೆಂದೋ ಬಗೆಯಬಹುದಾಗಿದೆ. ಅದಂತಿರಲಿ. ಸಾಮಾನ್ಯವಾಗಿ ಮನುಷ್ಯನು ಎಚ್ಚರದಲ್ಲಿರುವಾಗ ನಿಜ ಆತ್ಮನನ್ನು (ತನ್ನನ್ನು) ಸ್ಥೂಲವಾದ ದೇಹೇಂದ್ರಿಯ ಪ್ರಾಣಮನೋಬುದ್ಧಿಗಳೊಂದಿಗೆ ಅನ್ಯೋನ್ಯ ಆರೋಪ ಮಾಡಿಕೊಂಡೇ ಇರುತ್ತಾನೆ. ಅಭೇದವಾಗಿ ತಿಳಿದುಕೊಂಡು ಅವಲ್ಲಿ ನಾನು ನನ್ನದು ಎಂಬ ಅಭಿಮಾನವುಳ್ಳವನಾಗಿರುತ್ತಾನೆ. ಇದೇ ಅಧ್ಯಾಸವು = ಅಧ್ಯಾರೋಪವಾಗಿರುತ್ತದೆ. ಆಗ ಅವನು ಪರಿಣಾಮಗೊಂಡಂತೆ ಪ್ರೇಕ್ಷಕ ಪ್ರಮಾತೃರೂಪದಿಂದಿದ್ದು ಆ ವಿಶ್ವ ಎಂಬ ಮನಃಕಲ್ಪಿತಾತ್ಮನು ಇಂದ್ರಿಯ ಪ್ರಮಾಣಗಳ ಮೂಲಕವಾಗಿಯೇ ಸ್ಥೂಲಪದಾರ್ಥಗಳ ಜ್ಞಾನವಮಾಡಿಕೊಳ್ಳುತ್ತಿರುವನು. ಅಂದರೆ ವ್ಯಕ್ತವಾದ ವಿಷಯಗಳನ್ನು ಅನುಭವಿಸಿಕೊಂಡಿರುವನು. ಆಗ ಅವನ ಸ್ವಪ್ನ ಪ್ರಪಂಚವು ಪೂರ್ಣ ಲುಪ್ತವಾಗಿರುತ್ತದೆ. ಅದು ಎಲ್ಲಿಯೂ ಇರುವುದೇ ಇಲ್ಲ. ಅವನ ದೃಷ್ಟಿಯಲ್ಲಿ ಎಲ್ಲಾ ಹುಸಿ ಆಗಿರುತ್ತದಲ್ಲವೆ. ಸ್ವಪ್ನಾವಸ್ಥೆಯಲ್ಲಿ ಸ್ಥೂಲ ಶರೀರದ ಮೇಲಿನ ಅಭಿಮಾನವಿಲ್ಲದೇ ಸೂಕ್ಷ್ಮ ಶರೀರ ಅಂದರೆ ಮನಸ್ಸಿನೊಡನೆ ಅಭೇದವಾಗಿದ್ದು = ಅಧ್ಯಾಸ ಮಾಡಿಕೊಂಡು ಪರಿಣಾಮಗೊಂಡಂತಾಗಿ, ಆ ಸೂಕ್ಷ್ಮವಾದ ಮನಃಪ್ರಮಾಣದಿಂದ (ತೈಜಸ ಎಂಬ) ಕಲ್ಪಿತಾತ್ಮನೇ ಸೂಕ್ಷ್ಮವಾದ ವಿಷಯಗಳನ್ನು ಅನುಭವಿಸುತ್ತಾನೆ. ನಾನು ಎಂಬ ಅಭಿಮಾನವುಳ್ಳವನೇ ಆಗಿರುತ್ತಾನೆ. ಆಗ ಜಾಗ್ರತ್ ಪ್ರಪಂಚವು ಅವನ ದೃಷ್ಟಿಯಲ್ಲಿ ಇರುವುದೇ ಇಲ್ಲ. ಹುಸಿ ಆಗಿರುತ್ತದೆ. (ಹೀಗೆ ಎರಡು ಅವಸ್ಥೆಗಳೂ ಹುಸಿ ಎಂದೇ ನಿರ್ಣಯವಾಗುತ್ತದೆ.) ಹೀಗೆ ಈ ಎರಡು ಅವಸ್ಥೆಗಳಲ್ಲೂ ಆತ್ಮ-ಅನಾತ್ಮರ ಅನ್ಯೋನ್ಯ ಆರೋಪಾಧ್ಯಾಸವಿರುವುದರಿಂದ ನಿಜ ಆತ್ಮನ ನಿಜಸ್ವರೂಪವನ್ನು ಕಂಡುಕೊಳ್ಳಲು ದುಃಶಕವಾಗಿರುತ್ತದೆ. ಆದ್ದರಿಂದ ನಿದ್ರಾವಸ್ಥೆಯನ್ನು ವಿವೇಚನೆ ಮಾಡಿಕೊಂಡು ಆತ್ಮಸ್ವರೂಪವನ್ನು ಕಂಡುಹಿಡಿಯಬೇಕು. ಸುಷುಪ್ತಿಯಲ್ಲಿ ಆತ್ಮ ಅನಾತ್ಮರ ಪರಸ್ಪರಾರೋಪವಿರುವುದಿಲ್ಲ. ಆಗ ಆತ್ಮನಿಗೆ ದೇಹಾದಿಗಳ ಸಂಬಂಧ ತಪ್ಪಿ ಆತ್ಮನು ತಾನು ಕೇವಲವಾಗಿರುವನು (ಪ್ರಾಜ್ಞನಾಗಿರುವನು). ಆಗ ಯಾವ ಪ್ರಪಂಚವೂ ಇರುವುದೇ ಇಲ್ಲ. ಆಗ ಆರೋಪಾಧ್ಯಾಸವಿಲ್ಲದ್ದರಿಂದಲೇ ಆತ್ಮನು ಪ್ರಮಾತೃವಾಗಿರುವುದಿಲ್ಲ. ಮನ ಆದಿ

ಇಂದ್ರಿಯ ಪ್ರಮಾಣಗಳೂ ಇರುವುದಿಲ್ಲ. ಆಗ ಅವನ ಎಚ್ಚರ ಪ್ರಪಂಚ ಮತ್ತು ಸ್ವಪ್ನ ಪ್ರಪಂಚ ನಾಮರೂಪವಸ್ತು ಒಂದೂ ಇರುವುದೇ ಇಲ್ಲ. (ಸರ್ವ ಮಿಥ್ಯ ಅಲ್ಲವೇ.) ಆದರೆ ಆತ್ಮನು ತಾನೇ ತಾನು ನಿದ್ದೆಯನ್ನು = ಸುಖವನ್ನು ಅನುಭವಿಸಿಕೊಂಡಿರುತ್ತಾನೆ. ಇದೇ ಎಲ್ಲರ ಅನುಭವವಾಗಿದೆ. (ನಿದ್ದೆಗೆ ಸಾಕ್ಷೀ – ಮತ್ತು ಸುಖಾನುಭವಸ್ವರೂಪ ಪ್ರಾಜ್ಞ ಆತ್ಮಾ ಎಂದೇ ಸಿದ್ಧವಾಗುವುದು). ಇದರಿಂದ ಗೊತ್ತಾಗುವುದೇನೆಂದರೆ – ನಿಜ ಆತ್ಮನು ಯಾವಾಗಲೂ ಜ್ಞಾನಾನುಭವ ಸ್ವರೂಪನೇ ಮತ್ತು ಸುಖಸ್ವರೂಪನೇ ಆಗಿರುತ್ತಾನೆಂದೂ ಮತ್ತು ಅವನ ಜ್ಞಾನಕ್ಕೆ ಸಾಧನವೇನೂ ಬೇಕಾಗಿಲ್ಲ ಎಂದೂ ಅವನೇ ಜ್ಞಾನಸುಖ ಸ್ವರೂಪ ಎಂದೂ ಗೊತ್ತಾಗುವುದು. ಇದರಿಂದ ಮೂರು ಅವಸ್ಥೆಗಳಲ್ಲೂ ನಿಜವಾಗಿ ಅರಿಯುವವನು ಪ್ರಮಾತೃತ್ವವಿಲ್ಲದ ಪ್ರಾಜ್ಞ ಆತ್ಮನೇ ಎಂದೂ ಸಿದ್ಧವಾಗುವುದು. ಎರಡೂ ಅವಸ್ಥೆಗಳು ಮಿಥ್ಯಾ ಆದ್ದರಿಂದ ಜಾಗ್ರತ್‌ಸ್ವಪ್ನಗಳಲ್ಲಿ ಮನುಷ್ಯನ = ಪ್ರಮಾತೃವಿನ ಬುದ್ಧಿ ಮನಸ್ಸುಗಳಲ್ಲಿ ಹೊಳೆದು ತೋರುವ ನಾನು, ನೀನು, ಇದು, ಅದು, ಇತ್ಯಾದಿ ಜ್ಞಾನವು ನಿಜವಾದ ಜ್ಞಾನವಲ್ಲ ಎಂದೂ ಜ್ಞಾನದ ಆಭಾಸ = ಪ್ರತಿಬಿಂಬ ಎಂದು ತಿಳಿದುಕೊಳ್ಳಬೇಕು. ಅಂತು ಹೀಗೆ ಮೂರು ಅವಸ್ಥೆಗಳಲ್ಲೂ ಆತ್ಮನು ಜ್ಞಾನಾನುಭವ (ಪ್ರಾಜ್ಞ) ರೂಪನಾಗಿ ಇರುವುದು ಸಾರ್ವತ್ರಿಕಾನುಭವವೇ ಆಗಿರುತ್ತದೆ. ನಿದ್ರಾವಸ್ಥೆಯಲ್ಲಿ ಅನುಭವ ಇರುವುದಿಲ್ಲೆಂದು ಭಾವಿಸಬಾರದು. ಏಕೆಂದರೆ ಎಚ್ಚತ್ತಬಳಿಕ ಸುಖನಿದ್ರೆ ಆಯಿತು ಎಂದು ಮನುಷ್ಯನು ತನ್ನ ಅನುಭವವನ್ನು ಸ್ಮರಿಸಿಕೊಂಡು ಹೇಳುತ್ತಾನಲ್ಲವೆ ! ಸ್ಮರಣೆಯು ಯಾವಾಗಲೂ ಅನುಭವಪೂರ್ವಕವಾಗಿಯೇ ಇರುವುದು, ನಡೆಯುವುದು. ಅನುಭವಿಸದೇ ಇರುವುದನ್ನು ಸ್ಮರಿಸಲಾಗುವುದಿಲ್ಲ (ಇದೇ ಯುಕ್ತಿ). ಆದ್ದರಿಂದ ಯಾವಾಗಲೂ ಎಲ್ಲವನ್ನೂ ಅರಿಯುವವನು ಪ್ರಾಜ್ಞ ಆತ್ಮನೇ ಎಂದೂ, ಆತ್ಮನ ಅರಿವಿಗೆ ಮನ ಆದಿಗಳ ಸಾಪೇಕ್ಷೆ ಇಲ್ಲ. ಆತ್ಮನೇ ಜ್ಞಾನ ಅನುಭವ ಸ್ವರೂಪ ಎಂದೂ ನಿರ್ಣಯಮಾಡಿಕೊಳ್ಳಬೇಕು. ನಿದ್ರಾವಸ್ಥೆಯಲ್ಲಿ ದೇಹಾದಿ ಸಕಲ ಜಗತ್ಪದಾರ್ಥಗಳೂ ಆತ್ಮನಲ್ಲೇ ಲಯಹೊಂದಿರುತ್ತವಾದ್ದರಿಂದ ಬೇರೆ ಎರಡನೆಯ ವಸ್ತುವೇ ಇರುವುದಿಲ್ಲ. ನಾಮ ರೂಪ ಜಗತ್ತು ವಿಂಗಡವಾಗಿರುವುದಿಲ್ಲ. ಆತ್ಮನು ಒಬ್ಬನೇ ಅದ್ವಿತೀಯನಾಗಿರುತ್ತಾನೆ. (ಪ್ರಾಜ್ಞ = ಅವ್ಯಾಕೃತನಾಗಿರುತ್ತಾನೆ) ಆದ್ದರಿಂದಲೇ ಆಗ ವಿಶೇಷ ಜ್ಞಾನವುಂಟಾಗುವುದಿಲ್ಲ. ಜ್ಞಾನಸ್ವರೂಪನೇ ಆಗಿರುವ ಆತ್ಮನು

ಸುಷುಪ್ತಿಯಲ್ಲಿ ಏನೊಂದು ವಸ್ತುವನ್ನೂ ಅರಿಯುತ್ತಿರುವುದಿಲ್ಲ. ಆದ್ದರಿಂದ ಅವನ ದೃಷ್ಟಿಯಲ್ಲಿ ಆಗ ದೇಶ ಕಾಲ ಮತ್ತು ದೇಹಾದಿ ನಾಮ ರೂಪಗಳೊಂದೂ ಎಲ್ಲಿಯೂ ಇರುವುದಿಲ್ಲ ಎಂದು ನಿಶ್ಚಯಿಸಬೇಕು (ಇದೇ ಯುಕ್ತಿ). (ಆದ್ದರಿಂದಲೇ ಜಗನ್ಮಿಥ್ಯಾ ಎಂದು ಸಿದ್ಧವಾಗುವುದು) ಆಗ ಆತ್ಮನೇ ಇರುವುದಿಲ್ಲ ಎನ್ನುವಂತಿಲ್ಲ. ಏಕೆಂದರೆ ಆತ್ಮನಿಲ್ಲದಿದ್ದರೆ ಮತ್ತೆ ಯಾರು ಮನ ಆದಿಗಳನ್ನು ಎಚ್ಚಿಸಿ ಚೇತನಗೊಳಿಸುವವರು? ಎಚ್ಚರವಾಗುವಾಗ ದೇಹಾದಿ ನಾಮರೂಪ ಸಕಲವನ್ನೂ ಆತ್ಮನೇ ಯುಗಪತ್ ಸೃಜಿಸಿ ಅವನ್ನು ಚೇತನಗೊಳಿಸುವನು ಎಂದು ತಿಳಿಯಬೇಕು. ಇದರಿಂದ ನಿಶ್ಚಯವಾಗುವುದೇನೆಂದರೆ – ಸುಷುಪ್ತಿಸ್ಥಾನದಲ್ಲಿ ಆತ್ಮನು ಸುಖಾನುಭವ ಸ್ಥಿತಿಯಲ್ಲೇ ಇರುವನು. ಅವನ ಅನುಭವಕ್ಕೆ ಯಾವ ಸಾಧನಾಪೇಕ್ಷೆಯೂ ಇಲ್ಲ. ಅವನ ಜ್ಞಾನಕ್ಕೆ ಎಂದೂ ಚ್ಯುತಿಯಿಲ್ಲ ಎಂದು ದೃಢವಾಗುವುದಲ್ಲದೇ ಇಲ್ಲಿ ಮತ್ತೊಂದು ವಿಷಯವೂ ಗೊತ್ತಾಗುವುದು. ಅದೇನೆಂದರೆ ಆತ್ಮನ ಈ ನಿರ್ವಿಶೇಷಸ್ಥಿತಿಯು ಯಾವ ಬೇರೆ ಯೋಗ, ಕರ್ಮ, ಸಾಧನೆಯಿಂದ ಉಂಟಾಗುವಂತಹದಲ್ಲ. ಹೊಸದಾಗಿ ಸಂಪಾದಿಸಿಕೊಳ್ಳುವಂತಹದೂ ಅಲ್ಲ. ಇದೇ ನಿರುಪಾಧಿಕ ಆತ್ಮನ ದೇಹೇಂದ್ರಿಯಾದಿಗಳಿಲ್ಲದ, ಸುಖಾನುಭವವೇ ನಿತ್ಯ ಸಹಜಸ್ಥಿತಿ = ನಿತ್ಯ ಶುದ್ಧ ಬುದ್ಧ ಮುಕ್ತ ಸ್ವಭಾವವೇ ನಿಜ ಆತ್ಮನ ವಾಸ್ತವಸ್ವರೂಪ ಎಂದು ಗೊತ್ತುಮಾಡಿಕೊಳ್ಳಬೇಕು. ಆದರೆ ನಿದ್ರಿಸಿದ ಮನುಷ್ಯನು ಆಗ ತನ್ನ ಪರಮಾರ್ಥ ಅದ್ವೈತ ಸತ್ಯ ಸ್ಥಿತಿಯನ್ನು ಅರಿತುಕೊಂಡಿರುವುದಿಲ್ಲವಾದ್ದರಿಂದ ಅವನು ಸಂಸಾರಿಯಾಗಿಯೇ ಇರುತ್ತಾನೆ. ಎಚ್ಚೆತ್ತಮೇಲೂ ಸಂಸಾರಿಯೇ ಆಗಿರುತ್ತಾನೆ. (ಯಾರು ವಿಚಾರ ವಿವೇಕ ಅನುಭವ ಪ್ರಮಾಣಗಳಿಂದ ಆತ್ಮಸ್ವರೂಪವನ್ನು ಅರಿತುಕೊಂಡು ದೇಹಾದಿ ನಾಮರೂಪ ಪ್ರಪಂಚವೆಲ್ಲ ಮಿಥ್ಯಾ ಎಂದೂ ಅರಿತು ಈ ತತ್ತ್ವಜ್ಞಾನಾಗ್ನಿಯಿಂದ ಶುಭಾಶುಭ ಸಕಲ ಕರ್ಮಗಳನ್ನೂ ಸುಟ್ಟು ಭಸ್ಮಮಾಡಿಕೊಂಡಿರುತ್ತಾನೆಯೋ (ಯಾವನ ಕರ್ಮಕ್ಷಯವಾಗಿರುವುದೋ ಅವನೇ ಮುಕ್ತಿ ಪಡೆಯುತ್ತಾನೆ). ಅಂತಹ ತತ್ತ್ವಜ್ಞಾನಿಗಳು ಸಂಸಾರಬಂಧನದಿಂದ ಮುಕ್ತರಾಗುವರು. ಬುದ್ಧಿವೃತ್ತ್ಯಾರೂಢವಾದ = ಅನುಭವ ಗೋಚರವಾದ ಸ್ಥಿತಿ ವಿಷಯವೇ ಪುರುಷಾರ್ಥವಾಗುವುದು. ಅಂತಲ್ಲದುದು ಮನುಷ್ಯನಿಗೆ ಉಪಯೋಗವಾಗುವುದಿಲ್ಲ. ಅದು ಪುರುಷಾರ್ಥವಾಗುವುದಿಲ್ಲ). ಆದ್ದರಿಂದ

ನಿದ್ದೆಯು ಮೋಕ್ಷವಲ್ಲ. ಇಂತು ಮೇಲೆ ವಿವರಿಸಿರುವಂತೆ ಸುಷುಪ್ತಿಸ್ಥಾನದಲ್ಲಿ ಆತ್ಮನು ಅದ್ವಿತೀಯನಾಗಿರುತ್ತಾನೆ. ಅಂದರೆ ಬ್ರಹ್ಮವೇ ಆಗಿರುತ್ತಾನೆ ಎಂದು ಖಚಿತವಾಯಿತು. ಇದೇ ಸುಷುಪ್ತಿಸ್ಥಾನದ ಪರಿ ಆಗಿರುತ್ತದೆ.

ಇನ್ನು ಸ್ವಪ್ನಸ್ಥಾನದಲ್ಲಿನ ಪರಿ – ಆತ್ಮನು = ಮನುಷ್ಯಚೇತನನು ಸ್ಥೂಲ ಶರೀರದ ಸಂಬಂಧವನ್ನು ಬಿಟ್ಟು ಸೂಕ್ಷ್ಮ ಶರೀರವಾದ ಮನಸ್ಸಿನೊಡನೆ ಅಧ್ಯಾಸದಿಂದಿದ್ದುಕೊಂಡು (ಪರಿಣಾಮಗೊಂಡಂತಿದ್ದು) ವಾಸನಾರೂಪ ಅಂದರೆ ಸೂಕ್ಷ್ಮ ಶಬ್ದಾದಿ ವಿಷಯಗಳನ್ನು ಅನುಭವಿಸುವುದೇ ಸ್ವಪ್ನವಾಗಿರುತ್ತದೆ. ಮನಸ್ಸು ಜಾಗ್ರತ್ಕಾಲದಲ್ಲಿ ಅನುಭವಿಸಿದ್ದ ವಿಷಯಗಳ ವಾಸನೆ (ಸಂಸ್ಕಾರ) ಉಳ್ಳದ್ದಾಗಿರುವುದು. ಪರಿಣಾಮಗೊಳ್ಳುತ್ತಿರುವ ಅಂತಹ ಮನಸ್ಸಿನೊಂದಿಗೆ ಆತ್ಮನು ತಾದಾತ್ಮ್ಯಾಧ್ಯಾಸದಿಂದಿದ್ದುಕೊಂಡು ಸೂಕ್ಷ್ಮವಾಗಿಯೇ ಪ್ರಮಾತೃವಾಗಿರುತ್ತಾನೆ. ಆಗ ಆ ಕಲ್ಪಿತ ಪ್ರಮಾತೃ ರೂಪದ ಪ್ರಾತಿಭಾಸಿಕ ಆತ್ಮನು ಪರಿಣಾಮಗೊಳ್ಳುತ್ತಿರುವ ಮನೋಮಯನಾಗಿ ತಾನೇ ನಾನಾ ದೃಶ್ಯಪದಾರ್ಥರೂಪವಾಗಿಯೂ ತಾನೇ ಪ್ರೇಕ್ಷಕ ಪ್ರಮಾತೃ ರೂಪವಾಗಿಯೂ ಆಗಿದ್ದುಕೊಂಡು ಆ ತೈಜಸರೂಪದ ಕಲ್ಪಿತಾತ್ಮನು ಸುಖ- ದುಃಖಗಳನ್ನು ಅನುಭವಿಸುತ್ತಾನೆ. ಅಂದರೆ ಆಗ ಅಲ್ಲಿ ಕಲ್ಪಿತ ಪ್ರಾತಿಭಾಸಿಕ ತೈಜಸ ಆತ್ಮನು ಮನೋವೃತ್ತಿಗಳನ್ನನುಸರಿಸಿ ತಾನೇ ಕರ್ತೃ ಭೋಕ್ತೃ ಮತ್ತು ಭೋಗ್ಯ ವಸ್ತು ರೂಪವನ್ನು ಪಡೆದಂತೆ, (ಬೆಳಕು ರೂಪಗಳನ್ನು ಪ್ರಕಾಶಪಡಿಸುವಾಗ ಹೇಗೋ ಹಾಗೆ) ಪರಿಣಾಮಗೊಂಡಂತೆ, ನಿಜದಲ್ಲಿ ಪರಿಣಾಮಗೊಂಡಿರುವುದಿಲ್ಲವಾದರೂ ಹಾಗೆ ಆಗಿರುತ್ತಾನೆ. ಹೀಗೆ ಸ್ವಪ್ನಸ್ಥಾನದಲ್ಲಿ ಪ್ರಾತಿಭಾಸಿಕಾತ್ಮನು ಕಲ್ಪಿತ ಸೂಕ್ಷ್ಮ ವಿಷಯಗಳ ಅನುಭವ ಮಾಡುವುದು ಎಲ್ಲರ ಸ್ವಪ್ನಾನುಭವವಾಗಿರುತ್ತದೆ. ಆಗ ಅಲ್ಲಿನ ಕಲ್ಪಿತ ವಿಷಯಗಳು ಸೂಕ್ಷ್ಮವೂ ಅಸ್ಥಿರವೂ ಆಗಿರುತ್ತವೆ. ಸ್ವಪ್ನ ಸ್ಥಿತಿಯಲ್ಲಿ ಆತ್ಮನಲ್ಲದೇ ಬೇರೆ ವಸ್ತುತಃ ಕಾರಣವಾಗಲೀ ಕಾರ್ಯಪದಾರ್ಥಗಳಾಗಲೀ ಏನೂ ಇರುವುದಿಲ್ಲ. ಇದೇ ಎಲ್ಲರ ಅನುಭವವಾಗಿದೆ. ಅಂದಾಗ ಸ್ವಪ್ನದಲ್ಲಿ ಎಲ್ಲವೂ ಅಂದರೆ ದೃಕ್ ಮತ್ತು ದೃಶ್ಯ ಸಕಲವೂ ಆತ್ಮನೇ ಆಗಿರುತ್ತಾನೆ. (ಈ ಕಲ್ಪಿತಾತ್ಮನಿಗೆ ಸತ್ಯಪ್ರತ್ಯಗಾತ್ಮನೇ ಅಧಿಷ್ಠಾನ). ಇಂತು ಆಗ ಆತ್ಮನು ಬ್ರಹ್ಮವೇ ಆಗಿರುವುದೆಂದಾಯಿತು. (ಕಲ್ಪಿತವಾದುದು ಮಿಥ್ಯೆ = ಅಸತ್ಯವೇ)

ಇನ್ನು ಜಾಗ್ರತ್ ಸ್ಥಾನದ ಪರಿ – ಜಾಗ್ರದವಸ್ಥೆಯಲ್ಲಿ ಮನುಷ್ಯನು

(ಆತ್ಮಾ ಅನಾತ್ಮರ ಅಧ್ಯಾಸವಿರುವ ಅವಸ್ಥೆಯೇ ಜಾಗ್ರದವಸ್ಥೆಯು)



(ಜ್ಞಾನಿಯಾಗಿರಲಿ - ಅಜ್ಞಾನಿಯಾಗಿರಲಿ) ಸ್ಥೂಲವಾದ ದೇಹೇಂದ್ರಿಯಾದಿಗಳೊಡನೆ ಅನ್ಯೋನ್ಯಾರೋಪ ಅಧ್ಯಾಸ ಮಾಡಿಕೊಂಡೇ ಇರುತ್ತಾನೆ. (ಮೇಲಿದೆ) ಪರಿಣಾಮಗೊಂಡಂತೆ ಪ್ರಮಾತೃರೂಪದ ಕಲ್ಪಿತಾತ್ಮನಾಗಿರುತ್ತಾನೆ. ನಾನು ಮನುಷ್ಯ, ನಾನು ಕರ್ತೃ, ನಾನು ಭೋಕ್ತೃ ಎಂಬೀರೀತಿ ಅಭಿಮಾನವು ಅವನಲ್ಲಿ ಹುಟ್ಟುಗಟ್ಟಿರುತ್ತದೆ. ಈ ಅಭಿಮಾನ = ಅಹಂಕಾರದಿಂದ ತಾನು ಸ್ವತಂತ್ರ ಎಂದುಕೊಂಡೇ ವ್ಯವಹಾರಗಳಲ್ಲಿಯೂ ಜ್ಞಾನಕರ್ಮಗಳಲ್ಲಿಯೂ ತತ್ಪರನಾಗಿರುತ್ತಾನೆ. ಆಗ ಸತ್ತ್ವಗುಣ ರಜೋಗುಣಗಳು ಪ್ರಬಲವಾಗಿರುವುದ ರಿಂದ ಅವನ ದೇಹೇಂದ್ರಿಯ ಮನೋ ಬುದ್ಧಿಗಳೂ ಚುರುಕಾಗಿರುತ್ತವೆ. ಅಜ್ಞಾನಿಯಾದ ಮನುಷ್ಯನು ದೇಹೇಂದ್ರಿಯಗಳೊಡನೆ ಅಧ್ಯಾಸದಿಂದ ಅಭೇದವಾಗಿದ್ದುಕೊಂಡು ಪರಿಣಾಮಗೊಂಡಂತೆ ಕಲ್ಪಿತ ಪ್ರಮಾತೃರೂಪದ (ವಿಶ್ವ ಎಂಬ) ಚಿದಾಭಾಸನಾಗಿ (ಮಿಥ್ಯಾತ್ಮನಾಗಿ) ವ್ಯವಹರಿಸುತ್ತಾ ಸುಖ-ದುಃಖಗಳನ್ನು ಪರವಶನಾಗಿಯೇ ಅನುಭವಿಸಿಕೊಂಡಿರುತ್ತಾನೆ. ಆತ್ಮಾನಾತ್ಮ ವಿವೇಕವಿಲ್ಲದವನಿಗೆ ತನ್ನ ಪೂರ್ವೋತ್ತರವೂ ಸ್ಥಿತಿಗತಿ ವಿಷಯವೂ ತಿಳಿದಿರುವುದಿಲ್ಲ. ಕರ್ಮಶಾಸ್ತ್ರ ಸಿದ್ಧಾಂತವು ತಿಳಿಸಿರುವ ಸತ್ಯಸಂಗತಿ ಏನೆಂದರೆ - ಮನುಷ್ಯನು ಹಿಂದೆ ಮಾಡಿದ, ಜನ್ಮಾಂತರಗಳಲ್ಲಿ ಮಾಡಿದ ಪುಣ್ಯ ಪಾಪ ಕರ್ಮಗಳ ಫಲವನ್ನು ಪಡೆಯುವುದಕ್ಕಾಗಿ, ಅನುಭವಿಸುವುದಕ್ಕಾಗಿ ಈ ಲೋಕದಲ್ಲಿ ಜನ್ಮವನ್ನು ಪಡೆದಿರುವನು. ಇಂತಿದು ಶಾಸ್ತ್ರಪ್ರಮಾಣದಿಂದಲೂ ತರ್ಕಯುಕ್ತಿಗಳಿಂದಲೂ ಮತ್ತು ಅನುಭವದಿಂದಲೂ ದೃಢಪಟ್ಟಿರುತ್ತದೆ. ತತಶ್ಚ ಮನುಷ್ಯನು ತನ್ನ ಕರ್ಮಕ್ಕೆ ತಕ್ಕಂತೆ ಫಲವಾಗಿ ಸಿಕ್ಕಿದ ವಸ್ತು ವ್ಯಕ್ತಿಗಳನ್ನೋ, ಒದಗಿಬಂದ ಸಂದರ್ಭವನ್ನೋ, ಸನ್ನಿವೇಶವನ್ನೋ ಸಂಪರ್ಕಿಸಿಕೊಂಡು ಆಯಾಯಾ ಸಂಪರ್ಕ ಸೇವನೆಯಿಂದ ಸುಖವನ್ನೋ ದುಃಖವನ್ನೋ ಪರವಶತೆಯಿಂದಲೇ ಅನುಭವಿಸಿಕೊಂಡಿರುತ್ತಾನೆ. ಆದ್ದರಿಂದ ಮನುಷ್ಯನು ಪೂರ್ಣಸ್ವತಂತ್ರನಲ್ಲ. ಅಜ್ಞಾನಿ ಮನುಷ್ಯನು ಮಾಯಾವಶನೆ. ಅವಿದ್ಯಾಕಾಮ ಕರ್ಮಬದ್ಧನೇ. ಅವನಿಗೆ ಸಂಸಾರಬಂಧನ ಇದ್ದೇ ಇರುವುದು. ತತಶ್ಚ ಇಂತಹ ಅಜ್ಞಾನಾವಸ್ಥೆಯಲ್ಲಿ ಆಯಾಯಾ ಕರ್ಮಕರ್ತೃಗಳೂ ಆಯಾಯಾ ಕರ್ಮಫಲಭೋಕ್ತೃಗಳೂ ಬೇರೆ ಬೇರೆಯಾಗಿಯೇ ಇರುತ್ತಾರೆ. ಇಂತಿದು ಸತ್ಯಪರಮಾರ್ಥವಲ್ಲವಾದರೂ ವ್ಯಾವಹಾರಿಕ ಸತ್ಯವಾಗಿದೆ. ನಿಶ್ಚಿತವಾಗಿರುತ್ತದೆ. ಈ ತರ್ಕ ನ್ಯಾಯದ ಪ್ರಕಾರ ಹಿಂದೆ, ಹಿಂದಿನ ಜನ್ಮಗಳಲ್ಲಿ

ಕರ್ಮಮಾಡಿದವನು ಮನುಷ್ಯನು. ಅವನು ಕರ್ಮಮಯನೇ ಆಗಿರುತ್ತಾನೆ. ಯಾವ ಯಾವ ಕರ್ಮಗಳು ಯಾವ ಯಾವ ಕರ್ತೃಗಳಿಂದ ಮಾಡಲ್ಪಟ್ಟಿರುವುವೋ ಆ ಸರ್ವವೂ ಅಂದರೆ ಕರ್ಮಗಳು ಕರ್ತೃಮಯವಾಗಿಯೂ ಕರ್ತೃಗಳು ಕರ್ಮಮಯರಾಗಿಯೂ ಆಗಿರುತ್ತಾರಾದ್ದರಿಂದ ಆಯಾಯಾ ಕರ್ಮಗಳಿಂದ ಉಂಟಾಗುವ ಕರ್ಮಫಲಗಳೂ ಆಯಾಯಾ ಕರ್ಮಕರ್ತೃಮಯವೇ ಆಗಿದ್ದು ಆಯಾಯಾ ಕರ್ತಾರ್ತ್ಮರಿಗೇ ಸಂಬಂಧಪಟ್ಟುಕೊಂಡಿರುವುದರಿಂದಲೇ ಅವರವರೇ ಫಲಭೋಕ್ತೃಗಳಾಗಿರುತ್ತಾರೆ. ಇವೆಲ್ಲಾ ವ್ಯಾವಹಾರಿಕಸತ್ಯವಾಗಿದ್ದು ಮಿಥ್ಯಾತ್ಮರ ವಿಷಯವೇ ಆಗಿರುತ್ತದೆ. ಸತ್ಯಾತ್ಮನು = ಪ್ರತ್ಯಗಾತ್ಮನು ಸನ್ನಿಧಿಮಾತ್ರದಿಂದ ಪ್ರೇರಕ ಸಾಕ್ಷಿ ಮಾತ್ರವಾಗಿರುತ್ತಾನೆ. ತಟಸ್ಥ ಮಾತ್ರವಾಗಿರುತ್ತಾನೆ. (ಇದೇ ತತ್ತ್ವಜ್ಞಾನಿಯ ಸ್ಥಿತಿ) ಹೀಗೆ ಸಂಸಾರ ವ್ಯವಹಾರದಲ್ಲಿ ಕರ್ಮಗಳೂ, ಕರ್ಮಫಲಗಳೂ ಆಯಾಯಾ ಮಿಥ್ಯಾತ್ಮಮಯವೇಆಗಿರುತ್ತಿದ್ದು ಅವರವರಿಗೇ ಸಂಬಂಧಪಟ್ಟುಕೊಂಡಿರುವುದರಿಂದ ಸತ್ಯಾತ್ಮನ ಪ್ರತಿಬಿಂಬನಾದ ಚಿದಾಭಾಸರೂಪದ ವಿಶ್ವ ಎಂಬ ಮಿಥ್ಯಾತ್ಮನೇ ಕರ್ತಾರ್ತ್ಮನೂ ತಾನೇ ಭೋಕ್ತಾತ್ಮನೂ ಆಗಿರುತ್ತಾನೆ. ಆದರೆ ಸಾಕ್ಷೀ ಪ್ರತ್ಯಗಾತ್ಮನು ಸದಾ ಶುದ್ಧವಾಗಿಯೇ ಇರುತ್ತಾನೆ. (ಇದೇ ಜ್ಞಾನಿಯ ಸ್ಥಿತಿ.) ಹೀಗೆ ಜಾಗ್ರತ್ತಿನಲ್ಲಿ ಮತ್ತು ಸ್ವಪ್ನದಲ್ಲಿ ಚಿದಾಭಾಸರೂಪದ ಮಿಥ್ಯಾತ್ಮನು (ವಿಶ್ವ ತೈಜಸ ಎಂಬ ಕಲ್ಪಿತಾತ್ಮನು) ವ್ಯವಹರಿಸಿ ಜ್ಞಾನಾನುಭವ ಪಡೆಯುತ್ತಿದ್ದರೂ ಅರಿವು ಇಲ್ಲದ ಆ ಮಿಥ್ಯಾತ್ಮನಲ್ಲಿ ನಿಜವಾಗಿ ಅರಿಯುವ - ತಿಳಿಯುವ ಚೇತನನು (ಕೂಟಸ್ಥಸಾಕ್ಷಿ) ಬಿಂಬರೂಪದ ಸತ್ಯಾತ್ಮನೇ ಆಗಿರುತ್ತಾನೆ. ನಿಜವಾದ ಪ್ರತ್ಯಗಾತ್ಮನೇ ಆಗಿರುತ್ತಾನೆ. (ಆರೋಪಕ್ಕೆ ಅವನೇ ಅಧಿಷ್ಠಾನ) ಅವನೇ ಮುಖ್ಯ ಸತ್ಯ ವಸ್ತುವಾಗಿರುತ್ತಾನೆ. ಸುಖ- ದುಃಖ ವೇದನೆಗಳು ಕನಸಿನಲ್ಲಿ ತೈಜಸನಿಗೆ ಆಗುವಂತೆ ಆಯಾಯಾ ಮಿಥ್ಯಾತ್ಮರಿಗೇ = ವಿಶ್ವ ಎಂಬ ಕಲ್ಪಿತಾತ್ಮನಿಗೆ ಆಗುತ್ತಿರುತ್ತವೆ. ಕನ್ನಡಿಯಲ್ಲಿ ತೋರಿಕೊಂಡಿರುವ ಪ್ರತಿಬಿಂಬ ಮುಖವು ಮಿಥ್ಯೆ ಆಗಿದ್ದರೂ ಆ ಪ್ರತಿಬಿಂಬಕ್ಕೆ ಸ್ಥಿತಿಯನ್ನು ಕೊಡುವ ಬಿಂಬರೂಪ ಮುಖವೇ ಮುಖ್ಯವೂ, ಸತ್ಯವೂ ಆಗಿರುವುದಷ್ಟೆ ಹಾಗೆಯೇ ಪ್ರತಿಬಿಂಬರೂಪದ ಮಿಥ್ಯಾತ್ಮ ವಿಶ್ವ ಚಿದಾಭಾಸನಿಗೆ ಸತ್ತಾ ಚೈತನ್ಯಸ್ಥಿತಿಯನ್ನು ಕೊಡುವ ಬಿಂಬರೂಪನಾದ ಮುಖ್ಯಾತ್ಮನೇ ನಿಜ ಸತ್ಯವಾಗಿರುವನು. ಅವನೇ ಪ್ರತ್ಯಗಾತ್ಮನು = ಮನುಷ್ಯನು. ಆ ಸತ್ಯ ಆತ್ಮನು

ಒಬ್ಬನೇ ಇರುವನು. ಇಂತಹ ಸತ್ಯಾತ್ಮನು ಬ್ರಹ್ಮನೇ ಆಗಿರುತ್ತಾನೆ ಎಂದು ನಿಶ್ಚಯ ಮಾಡಿಕೊಳ್ಳಬೇಕು.

ಈ ರೀತಿ ಅವಸ್ಥಾತ್ರಯವನ್ನು ಪರೀಕ್ಷಿಸಿ ವಿಚಾರ ಮಾಡಿಕೊಂಡಾಗ ಜಿಜ್ಞಾಸು ಮನುಷ್ಯನು ತಾನು ಎಂಬ ನಿಜವಾದ ಪ್ರತ್ಯಗಾತ್ಮನು ಬ್ರಹ್ಮವೇ ಎಂದು ಗೊತ್ತಾಗುವುದು. ನಿಶ್ಚಯವೇ ಆಗುವುದು. ಬ್ರಹ್ಮವೇ ಆಗಿರುವ ಆತ್ಮಚೇತನನೇ ಸತ್ಯ. ತದ್ಭಿನ್ನವಾದ ವಿಶ್ವ ತೈಜಸ ಮೊದಲಾದ ಅನಾತ್ಮವೆಲ್ಲವೂ ಕಲ್ಪಿತವೇ ಹಾಗೂ ಜಗನ್ನಾಮರೂಪಗಳೆಲ್ಲವೂ ಅಸತ್ಯವೇ. ಮಿಥ್ಯೆ ಎಂದು ನಿಶ್ಚಯ ಮಾಡಿಕೊಳ್ಳಬೇಕು. ಮಿಥ್ಯಾ ಎಂದರೆ ಅಸತ್ ಇಲ್ಲದುದು ಎಂದರ್ಥವಲ್ಲ. ಗಗನ ಕುಸುಮ ಎನ್ನುವುದು ಅಸತ್ ಇಲ್ಲದುದು. ಮಿಥ್ಯಾ ಪದಾರ್ಥವು ಹಾಗಲ್ಲ. ಸ್ವಪ್ನವು ಮಿಥ್ಯೆ. ಆಗಿನ ಕಾಲದಲ್ಲಿ ಅಲ್ಲಿನ ವ್ಯಾವಹಾರಿಕವಾಗಿ ಕರ್ಮಫಲವಾದ ವಸ್ತುಗಳು ಇದ್ದೇ ಇರುತ್ತವೆ. ಅಂದರೆ ಮನುಷ್ಯನ ಕರ್ಮಫಲವಾದ ನಾಮರೂಪಗಳಲ್ಲೆಲ್ಲಾ ಬ್ರಹ್ಮಾತ್ಮನೇ ತುಂಬಿಕೊಂಡಿದ್ದು ಅವನೇ ಸ್ವಪ್ನ ಮತ್ತು ಜಾಗ್ರತ್ ವಸ್ತುರೂಪದಿಂದ ತೋರುತ್ತಿರುವನು. ಆದರೆ ಕಾಲಾಂತರದಲ್ಲಿ - ಬೇರೆ ಅವಸ್ಥೆಯಲ್ಲಿ (ಅವಸ್ಥೆಯು ಬದಲಾದಾಗ) ಅವು ಇರುವುದೇ ಇಲ್ಲ. ಅದರ ಗುರುತು ಕೂಡಾ ಇರುವುದಿಲ್ಲ. ಹಾಗೆಯೇ ವ್ಯಾವಹಾರಿಕ ಸತ್ಯ ಎನ್ನುವುದು (ಸದಸದ್ವಿಲಕ್ಷಣ = ಸದ್ವಸ್ತು ಅಸದ್ವಸ್ತು ಅಲ್ಲದ ಪದಾರ್ಥವೇ ಮಿಥ್ಯ ಎಂದು ತಿಳಿಯಬೇಕು). ತತ್ವವಿಚಾರ ಮಾಡಿಕೊಂಡು ನಾಮರೂಪ ವ್ಯವಹಾರವೆಲ್ಲಾ ಮಿಥ್ಯೆ ಎಂದು ಅರಿತುಕೊಂಡಾಗ, ವ್ಯವಹಾರವು ಬಾಧಿತವಾದಾಗ = ಮಾಯೆ ಎಂದು ನಿರ್ಣಯ ಮಾಡಿಕೊಂಡಾಗ ನಿಜವಲ್ಲ ಎಂದು ತಿಳಿದಾಗ ಆ ವಸ್ತು ವ್ಯವಹಾರವೆಲ್ಲವೂ ಅನುಭವಗಳೆಲ್ಲವೂ ಮಿಥ್ಯೆಯೇ, ಹುಸಿಯೇ ಎಂದು ನಿರ್ಣಯವಾಗುವುದು. (ಇದೇ ಎಚ್ಚರದಲ್ಲಿ ಎಚ್ಚರ) ಹಾಗೂ ಆ ನಾಮರೂಪಗಳು ತ್ರಿಕಾಲದಲ್ಲೂ ಎಲ್ಲಿಯೂ ನಿಜವಾಗಿ ಇರುವುದಿಲ್ಲೆಂದೇ ನಿಶ್ಚಯಮಾಡಿಕೊಳ್ಳಬೇಕು. ಅಂದಾಗ ಈ ಜಾಗರಾವಸ್ಥೆಯೂ ಒಂದು ಬಗೆಯ ಸ್ವಪ್ನವೇ (ವಿಶ್ವನ) ಮಾಯೆಯಿಂದ ಪರಿಣಾಮಗೊಂಡಂತೆ ಎಂದು ಸಿದ್ಧವಾಗುವುದು. ಹೀಗೆ ಅವಸ್ಥಾತ್ರಯವನ್ನು ಪರೀಕ್ಷಿಸಿ ವಿವೇಚಿಸಿಕೊಂಡಾಗ ಸರ್ವಂ ಖಲ್ವಿದಂ ಬ್ರಹ್ಮ ಎಂಬ ವಿಷಯವು ಸಮರ್ಥಿತವಾಗುವುದು ನಿಶ್ಚಯವಾಗುವುದು.

ಇನ್ನು ಸೃಷ್ಟಿ ಎಂಬ ಪ್ರಮೇಯವನ್ನು ಹಾಗೂ ಕಾರ್ಯಕಾರಣಭಾವವನ್ನು ಪರೀಕ್ಷೆ = ವಿಚಾರ ಮಾಡಿಕೊಂಡಾಗಲೂ ಇದೇ ನಿಶ್ಚಯವು ಸಿದ್ಧವಾಗುವುದು.

ಹೇಗೆಂದರೆ ಯುಕ್ತಿ, ಅನುಭವದ ಪ್ರಕಾರ ಕಾರಣವಿಲ್ಲದೇ ಕಾರ್ಯವು ಉಂಟಾಗುವುದಿಲ್ಲ. ಈ ನಾಮರೂಪ ಜಗತ್ತು ಹುಟ್ಟಿರುತ್ತದೆ. ಅಂದರೆ ಕಾರ್ಯವಾಗಿದೆ. ಹುಟ್ಟಿ ಇರುವುದು ತಾನೆ ತೋರುವುದು. ಹುಟ್ಟದೇ ಇರುವುದು ತೋರುವುದೇ ಇಲ್ಲ. ಇಲ್ಲಿ ತೋರುತ್ತಿರುವ ಜಗತ್ತೆಂಬ ಕಾರ್ಯಕ್ಕೆ ಕಾರಣ ಏನು? ವಿಚಾರ ಮಾಡೋಣ. ಈ ಜಗತ್ತು ಕೇವಲ ಜಡವಲ್ಲ. ಚರಾಚರಾತ್ಮಕ = ಚೇತನಾಚೇತನಾತ್ಮಕವಾಗಿದೆ. ಇಂತಹ ಅದ್ಭುತವಾದ ಕಾರ್ಯಕ್ಕೆ ಅರ್ಹವಾದ ಕಾರಣ ಏನಿರಬಹುದು ಎಂದು ಎಷ್ಟು ಚಿಂತಿಸಿದರೂ ಮನುಷ್ಯ ಬುದ್ಧಿಗೆ ನಿಲುಕುವುದಿಲ್ಲ. ನಿಶ್ಚಯವಾಗುವುದೇ ಇಲ್ಲ. ಮನುಷ್ಯನು ಇದ್ದೇ ಇರುತ್ತಾನೆ. ಮತ್ತು ಈ ನಾಮ ರೂಪ ವಿಶ್ವ ವ್ಯವಹಾರವನ್ನು ಅನುಭವಿಸುಕೊಂಡಿರುತ್ತಾನೆ ಎಂಬುದು ವ್ಯಾವಹಾರಿಕ ಆಗಿದೆ. ಶಾಸ್ತ್ರವು ಈ ನಾಮರೂಪ ಜಗತ್ತಿಗೆ ಬ್ರಹ್ಮವೇ ಕಾರಣವೆಂದು ತಿಳಿಸಿಕೊಡುತ್ತಿದೆ. ಇದನ್ನು ಒಪ್ಪಲೇಬೇಕು. ಒಪ್ಪಿದ್ದರಿಂದ ನಷ್ಟವಿಲ್ಲ. ಮತ್ತೆ ಹೆಚ್ಚಿನ ಪ್ರಯೋಜನವೇ ಇರುವುದು. ಆ ವಿಷಯ ಹಾಗಿರಲಿ. ಪ್ರಕೃತ ಗಡಿಗೆ ಎಂಬ ಕಾರ್ಯವು ಹುಟ್ಟುವುದಕ್ಕೆ ಮಣ್ಣು ಎಂಬ ಕಾರಣ ವಸ್ತು ಮೊದಲು ಇದ್ದೇ ಇರುವುದಷ್ಟೆ. ಹಾಗೆಯೇ ಈ ಚರಾಚರ ನಾಮರೂಪ ಜಗತ್ತು ಹುಟ್ಟುವುದಕ್ಕೆ ಮೊದಲು ಅಂದರೆ ಪ್ರಳಯ ಕಾಲದಲ್ಲಿ ಬ್ರಹ್ಮವಸ್ತು ಒಂದೇ ಇದ್ದಿತ್ತು ಎಂದು ತಿಳಿಯಬೇಕು. ಇದು ಕೇವಲ ಕಲ್ಪನೆ ಅಲ್ಲ. ಅನುಭವದಿಂದಲೇ ಗೊತ್ತಾಗುತ್ತಿದೆ. ಹೇಗೆಂದರೆ ವಿಶೇಷವೇನೂ ಇಲ್ಲದ ಸುಷುಪ್ತಿ ಸ್ಥಿತಿಯಲ್ಲಿ ನಿರ್ವಿಶೇಷ = ಪ್ರಾಜ್ಞರೂಪ ಚೇತನಾತ್ಮನೊಬ್ಬನೇ ಇರುತ್ತಾನಷ್ಟೆ. ಅಂತೆಯೇ ಆದಿಯಲ್ಲಿ ನಿರ್ವಿಶೇಷ ಬ್ರಹ್ಮಚೇತನನೊಬ್ಬನೇ ಇರುವನೆಂದು ಶಾಸ್ತ್ರವು ಪ್ರತಿಪಾದಿಸುತ್ತಿದೆ. ಆ ಬ್ರಹ್ಮವೇ ಈಶ್ವರನು. ಮಾಯಾ ಕಾರಣೋಪಾಧಿಯಿಂದಿರುವ ಅವನೇ ಈ ಜಗತ್ತಿಗೆ ಉಪಾದಾನಕಾರಣ ಮತ್ತು ನಿಮಿತ್ತಕಾರಣವಾಗಿರುತ್ತಾನೆ. (ಜೇಡರ ಬಲೆಗೆ ಜೇಡರ ಕ್ರಿಮಿಯಂತೆ) ಅಂದರೆ ಬ್ರಹ್ಮವೇ ಆದ ಈಶ್ವರನಿಂದ ಈ ವಿಶ್ವಕಾರ್ಯವು ಉಂಟಾಗಿರುವುದು. ಗಡಿಗೆಗೆ ಮಣ್ಣು ಕಾರಣ. ಅದರ ಕಾರ್ಯವಾದ ಗಡಿಗೆಯು ಕೇವಲ ಮಣ್ಣೇ ಆಗಿರುತ್ತದಲ್ಲವೆ. ಹಾಗೆಯೇ ಬ್ರಹ್ಮಕಾರ್ಯವಾದ ಜಗತ್ತು ಬ್ರಹ್ಮವೇ ಆಗಿರುತ್ತದೆಂದು ತಿಳಿಯಬೇಕು. ಕಾರ್ಯಕಾರಣಗಳಿಗೆ ಭೇದವಿರುವುದಿಲ್ಲ. ಬಂಗಾರದ ಒಡವೆಯು ಬಂಗಾರವೇ ಆಗಿರುವುದಷ್ಟೆ. ಆದ್ದರಿಂದ ಬ್ರಹ್ಮನ ವಿಕಾರವಾದ (ಪರಿಣಾಮ = ಕಾರ್ಯ) ಚಿಪ್ಪಿನಲ್ಲಿ ಬೆಳ್ಳಿ ಹೇಗೋ ಹಾಗೆ - ಅಥವಾ ಹಾಲು ಮೊಸರು, ಬೆಣ್ಣೆ ತುಪ್ಪ ಆದಂತೆ ವಿಶ್ವವೆಲ್ಲಾ

ಬ್ರಹ್ಮವೇ ಆಗಿದೆ. ಜಗತ್ಕಾರಣನಾದ ಈಶ್ವರನು ನಿತ್ಯ ಸರ್ವಜ್ಞ, ಸರ್ವಶಕ್ತ, ಸರ್ವವ್ಯಾಪಿ ಎಂಬಿತ್ಯಾದಿಯಾಗಿ ಈ ಹಿಂದೆ ಪ್ರತಿಪಾದಿಸಿರುವುದನ್ನು ಇಲ್ಲಿ ಪುನಃ ಜ್ಞಾಪಿಸಿಕೊಳ್ಳಬೇಕು. ಷಡ್ಗುಣೈಶ್ವರ್ಯ ಸಂಪನ್ನನಾದ ಆ ಈಶ್ವರನು ಮಹಾಮಹಿಮನಿರುವಂತೆ ಮಹಾ ದಯಾಮಯನೂ ಆಗಿರುತ್ತಾನೆ. ಇದೂ ಅವನದೇ ವೈಶಿಷ್ಟ್ಯವು. ಅವನು ದಯಾಳುವಾದ್ದರಿಂದಲೇ ಹಿಂದೆ= ಈಗಲೂ ಸಂಸಾರ ಬಂಧನದಿಂದ ಮೋಕ್ಷ ಪಡೆಯದೇ ಇರುವ ಸಕಲ ಜೀವಾತ್ಮರ ತ್ರಿವರ್ಗ, ಅಪವರ್ಗ ಸಾಧನೆಗಳಿಗೆ ಉಪಕಾರವಾಗುವಂತೆ ಮತ್ತು ಜೀವರಿಗೆ ಅವರವರ ಕರ್ಮಫಲ ಪ್ರಾಪ್ತಿ ಆಗುವಂತೆ ಜೀವಕಾರುಣ್ಯದಿಂದಲೇ ಜೀವರ ಉದ್ಧಾರಕ್ಕೋಸ್ಕರ ಈಶ್ವರನು ಸೃಷ್ಟಿಸಂಕಲ್ಪ ಮಾಡಿರುತ್ತಾನೆ. ಮನುಷ್ಯಾದಿ ಪ್ರಾಣಿಗಳನ್ನೂ ಸೃಜಿಸಿರುತ್ತಾನೆ. ಈ ಮನುಷ್ಯ ಜನ್ಮದಲ್ಲೇ ಪರಮಾರ್ಥ ತತ್ತ್ವವಿಚಾರಕ್ಕೆ ಸಾಧ್ಯವಿರುವುದು. ಆದ್ದರಿಂದಲೇ ಮನುಷ್ಯ ಜನ್ಮವು ಶ್ರೇಷ್ಠವಾಗಿದೆ. (ಈ ವಿವರಣೆಯಿಂದ ಈಶ್ವರನು ಪಕ್ಷಪಾತಿ ನಿಷ್ಕರುಣಿ ಎಂಬ ವಾದಗಳೆಲ್ಲಾ ನಿರಾಕೃತವಾಗುವುವು) ಈಶ್ವರ ಸಂಕಲ್ಪ ಎಂದರೆ ಅವನ ಇಚ್ಛೆ. ಈ ಇಚ್ಛೆಯು ಅವನ ಜ್ಞಾನದ ಪ್ರಕಾರವೇ ಆಗಿರುತ್ತದೆ ಮತ್ತು ಇದೇ ಈಶ್ವರನ ಶಕ್ತಿ. ಇದನ್ನೇ ಮಾಯಾಶಕ್ತಿ ಎಂದೂ ಹೇಳುತ್ತಾರೆ. ಈಶ್ವರನ ಇಚ್ಛೆಗೂ ಶಕ್ತಿಗೂ ಎಂದೂ ಚ್ಯುತಿಯಿಲ್ಲ. ಅವನು ಅಮೋಘ ವೀರ್ಯಸಂಕಲ್ಪನು. ಆದ್ದರಿಂದಲೇ ಇಚ್ಛಾಮಾತ್ರಂ ಪ್ರಭೋಃ ಸೃಷ್ಟಿಃ ಎಂದು ಬಲ್ಲವರು ತಿಳಿಸಿಕೊಟ್ಟಿದ್ದಾರೆ. ಅಂತೆಯೇ ಈಶ್ವರನು ಬೇರೆ ಯಾವ ಸಾಮಗ್ರಿ, ಉಪಕರಣ ಸಹಾಯ ಇಲ್ಲದೇ ಸ್ವಮಾಯಾ ಶಕ್ತಿಯಿಂದ ವಿಶ್ವವನ್ನು ಸೃಜಿಸಿರುವನು. ಇಂದ್ರಜಾಲ ವಿದ್ಯೆ, ಮಂತ್ರಸಿದ್ಧಿ, ತಪಃಶಕ್ತಿ ಇರತಕ್ಕಂಥವನು ಸ್ವಯಂ ಅದ್ಭುತ ವಸ್ತುಪ್ರದರ್ಶನವನ್ನು ತೋರಿಸಬಲ್ಲನೆಂದು ತಿಳಿದಿರುವುದಷ್ಟೆ. ಹಾಗೆಯೇ ದೇವ ಮಾಯೆಯಿಂದ ನಾಮರೂಪ ಕರ್ಮಮಯವಾದ ಈ ಪ್ರಪಂಚವು ಉದ್ಭವಿಸಿಕೊಂಡಿರುತ್ತದೆ. ಮನುಷ್ಯಾದಿ ಪ್ರಾಣಿಗಳ ಜೀವನಕ್ಕೆ ಬೇಕಾದ ಉಪಕಾರಕವಾದ ಭೂಮಿ, ಆಶ್ರಯ, ಗಾಳಿ, ಬೆಳಕು, ನೀರು, ಅನ್ನ, ಆಹಾರ ಮೊದಲಾದ ಭೋಗ್ಯವಸ್ತು ಪದಾರ್ಥಗಳೆಲ್ಲವೂ ಇಲ್ಲಿ ಸಿದ್ಧವಾಗಿರುವುವು. ಅಂದರೆ ಕರ್ಮಶೇಷವುಳ್ಳ ಜೀವರ ಧರ್ಮಾಧರ್ಮಗಳಿಗೆ ಅನುಗುಣವಾಗಿ ಅವರವರಿಗೆ ತಕ್ಕತಕ್ಕ ಫಲಪ್ರಾಪ್ತಿಯಾಗಿರುತ್ತದೆ ಅಂದರೆ ನಾಮರೂಪ ವಸ್ತುಗಳ ಹಂಚಿಕೆ ಆಗಿರುತ್ತದೆ ಎಂದು ತಿಳಿಯಬೇಕು. ಇಂತಹ ಸೃಷ್ಟಿಯು ಮಾಯೆ ಆದ್ದರಿಂದ ಈಶ್ವರ ದೃಷ್ಟಿಯಿಂದ

ನೋಡಿದರೆ ಹಾಗೂ ಪರಮಾರ್ಥ ತತ್ತ್ವಜ್ಞಾನಿ ದೃಷ್ಟಿಯಿಂದ ನೋಡಿದರೆ ಈ ಪ್ರಪಂಚವು ಹುಟ್ಟಿಯೇ ಇಲ್ಲ. ಸೃಷ್ಟಿಯೇ ಆಗಿಲ್ಲ. ಶುದ್ಧ ಆತ್ಮನು ಯಾವಾಗಲೂ ತಾನೇತಾನಾಗಿ ಅದ್ವಯನಾಗಿಯೇ ಇರುತ್ತಾನೆ. ಆದರೆ ಅಮುಕ್ತರಾದ ಜೀವರ ದೃಷ್ಟಿಯಲ್ಲಿ ಅವರ ಕರ್ಮಫಲವೇ ಆದ ಜಗತ್ ಸೃಷ್ಟಿಯು ಆಗಿರುತ್ತದೆ. (ಇಲ್ಲಿ ಆಕಾಶಾದಿ ಭೂತಗಳ ಉತ್ಪತ್ತಿ ಕ್ರಮವನ್ನು ಕ್ರಮಸೃಷ್ಟಿ ಎಂದು ಚಿಂತಿಸಬೇಕು. ಸ್ವಪ್ನ ಜಾಗರಗಳು ಯುಗಪತ್ ಸೃಷ್ಟಿ ಎಂದು ಚಿಂತಿಸಬೇಕು) ಇಂತಿರುವ ಸೃಷ್ಟಿಯು ವ್ಯಾವಹಾರಿಕ ಸತ್ಯವಾಗಿರುತ್ತದೆ. ಪಾರಮಾರ್ಥಿಕ ಸತ್ಯವಲ್ಲ. ಸ್ವಪ್ನದಂತೆ ಮಿಥ್ಯೆ ಆಗಿದೆ. ಅಜ್ಞಾನಿಗಳಿಗೆ ಈ ಸೃಷ್ಟಿಮರ್ಮವು ತಿಳಿದಿರುವುದಿಲ್ಲ. ಅವರು ಅನುಭವಿಸಬೇಕಾದ ಕರ್ಮಶೇಷವು ಇರುವುದಷ್ಟೆ ಅಂತಹ ಜೀವರು ಈ ಮಾಯಾ ಪ್ರಪಂಚವನ್ನು ನಿಜ, ಸತ್ಯ ಎಂದೇ ನಂಬಿಕೊಂಡಿರುತ್ತಾರೆ. ಮಿಥ್ಯೆ ಎಂದು ಬಗೆಯುವುದಿಲ್ಲ. ಅಜ್ಞಾನದಲ್ಲಿಯೇ ಇದ್ದುಕೊಂಡು ಮೋಹನಿದ್ರೆಯಲ್ಲೇ ಲೋಕವ್ಯವಹಾರವೆಂಬ ಸ್ಥಿರಸ್ವಪ್ನವನ್ನೇ ಅನುಭವಿಸಿಕೊಂಡಿರುತ್ತಾರೆ. ಸಂಸಾರ ಚಕ್ರದಲ್ಲೇ ಭ್ರಮಿಸಿಕೊಂಡಿರುತ್ತಾರೆ. ಆದರೆ ತತ್ತ್ವವನ್ನರಿತ ಜ್ಞಾನಿಗಳು ಕಂಡುಕೊಂಡಿರುವುದೇನೆಂದರೆ ಬ್ರಹ್ಮ ಸತ್ಯಂ ಜಗನ್ಮಿಥ್ಯಾ ಆತ್ಮನು ಒಬ್ಬನೇ ಸತ್ಯ ಎಂದೇ ಅವರು ನಿಶ್ಚಯ ಮಾಡಿಕೊಂಡಿರುತ್ತಾರೆ. ತತ್ತ್ವಜ್ಞಾನಾಗ್ನಿಯಿಂದ ತಮ್ಮ ಪುಣ್ಯ ಪಾಪ ಕರ್ಮಗಳನ್ನು ಸಂಪೂರ್ಣವಾಗಿ ಸುಟ್ಟು ಭಸ್ಮಮಾಡಿಕೊಂಡಿರುತ್ತಾರೆಯೋ ಅವರು ಮೋಕ್ಷ ಪಡೆಯುವರು. ಅವರೇ ಭವಸಾಗರವನ್ನು ದಾಟುತ್ತಾರೆ. ಅಜ್ಞಾನಿಗಳಾದ ಮನುಷ್ಯರು (ತಮ್ಮಲ್ಲೇ ಸ್ವಪ್ನವನ್ನು ಕಾಣುವಂತೆ) ಬ್ರಹ್ಮಾತ್ಮನಲ್ಲೇ ನಾಮರೂಪ ಕರ್ಮಮಯ ಪ್ರಪಂಚವನ್ನು ಕಾಣುತ್ತಾರೆ. ಅಂದರೆ ಸಂಸಾರೀ ಜನರಿಗೆ ಅವರವರ ಪೂರ್ವಕರ್ಮಗಳ ಫಲವಾಗಿ ದೇಹಾದಿಗಳೂ ಮತ್ತು ಭೋಗ್ಯ ಪದಾರ್ಥಗಳೂ ಪ್ರಾಪ್ತವಾಗಿರುತ್ತವೆ. ಅವರು ಅವನ್ನೆಲ್ಲಾ ಸತ್ಯವೆಂದೇ ಬಗೆಯುತ್ತಾರೆ ಆ ವಿಷಯಗಳನ್ನು ಅನುಭವಿಸಿಕೊಂಡಿರುತ್ತಾರೆ. ಸಂಸಾರಿಗಳೇ ಆಗಿರುತ್ತಾರೆ. ಅಂತಹವರಲ್ಲಿ ಸುಗುಣಿಗಳು, ಕೃತಜ್ಞರು ಆದ ಜನರು ಭಗವದ್ಭಕ್ತಿಯಿಂದ ಈಶ್ವರೋಪಾಸಕರಾಗಿ ತಮ್ಮ ಜನ್ಮವನ್ನು ಸದುಪಯೋಗಮಾಡಿಕೊಳ್ಳುತ್ತಾರೆ. ಸಾರ್ಥಕ ಪಡಿಸಿಕೊಳ್ಳುತ್ತಾರೆ. ಅಂತಲ್ಲದ ಅಜ್ಞಾನಿ ಅವಿದ್ಯಾವಂತರಾದ ಮಿಕ್ಕವರು ಕೃತಘ್ನರು, ದುರ್ವ್ಯಸನಿಗಳು ಸ್ವಾತ್ಮನನ್ನೇ ಅರಿಯದೇ ಮರೆತುಕೊಂಡು ಬಹಿರ್ಮುಖರಾಗಿಯೇ ಕಾಲ ಕಳೆಯುತ್ತಾ ಅಮೂಲ್ಯವಾದ ತಮ್ಮ ಜೀವನವನ್ನು

ದುರುಪಯೋಗ ಮಾಡಿಕೊಳ್ಳುತ್ತಾರೆ. ವ್ಯರ್ಥ ಮಾಡುತ್ತಾರೆ. ಸಂಸಾರಿಗಳೇ ಆಗಿರುತ್ತಾರೆ.

ಈ ಪ್ರಪಂಚ ಸೃಷ್ಟಿಯನ್ನು ಕನಸಿನಂತೆ, ಇಂದ್ರಜಾಲ ಸೃಷ್ಟಿಯಂತೆ ತಿಳಿಯಬೇಕು. (ಜಗತ್ತು ಪರಮಾರ್ಥ ಸತ್ಯವೇ ಆಗಿದ್ದರೆ ಅದು ತತ್ತ್ವಜ್ಞಾನದಿಂದ ತೊಲಗುವುದೇ ಇಲ್ಲ ಆಗ ಬ್ರಹ್ಮೈಕ್ಯವೆಂಬ ಮೋಕ್ಷವೂ ಸಿದ್ಧಿಸಲಾರದು) ಮಿಥ್ಯೆಯಾದ ಕನಸಿನಲ್ಲಿ ಇರುವ ತೋರುವ ವಸ್ತುಗಳೆಲ್ಲವೂ (ದೃಗ್ - ದೃಶ್ಯಗಳು) ಆತ್ಮಮಯವೇ ಆಗಿರುವುದೆಂಬುದನ್ನು ಹಿಂದೆಯೇ ವಿವರಿಸಿದೆ. ಇಂದ್ರಜಾಲ ಮಾಯಾ ಪ್ರದರ್ಶನದಲ್ಲೂ ಹಾಗೆಯೇ. ಅಲ್ಲಿನ ದೃಶ್ಯವಸ್ತುಗಳಲ್ಲೆಲ್ಲಾ ಮಾಯೆಯಿಂದ ಮಾಯಾವಿಯೇ, ಮಂತ್ರವಾದಿಯೇ ತುಂಬಿರುತ್ತಾನೆ. ನಿಜವಾದ ಬೇರೆ ವಸ್ತುವೇ ಇರುವುದಿಲ್ಲ. ಹಾಗೆಯೇ ಅವಿದ್ಯಾಮಾಯಾ ಪರಿಣಾಮಕಾರ್ಯಗಳಾದ ಪ್ರಪಂಚ ನಾಮ ರೂಪ ಕರ್ಮಗಳಲ್ಲೆಲ್ಲಾ ಬ್ರಹ್ಮಾತ್ಮನೇ ವ್ಯಾಪಿಸಿ ತುಂಬಿಕೊಂಡು ಅವನೇ ಪರಿಣಾಮಗೊಂಡಂತೆ ಆಗಿರುವುದು. ವಸ್ತುಪ್ರಕಾಶಕವಾದ ಬೆಳಕು ಆಯಾಯಾ ಆಕಾರಗಳನ್ನು ಮತ್ತು ಕೆಂಪು ಹಳದಿ ರೂಪಗಳನ್ನು ಪ್ರಕಟಗೊಳಿಸುವಾಗ ಬೆಳಕೇ ಆಯಾಯಾ ರೂಪಗೊಂಡಂತೆಯೇ ಇದು ಎಂದು ತಿಳಿಯಬೇಕು. ಬೆಳಕು ವಸ್ತುತಃ ಪರಿಣಾಮಗೊಂಡಿರುವುದಿಲ್ಲ. ಭ್ರಮೆಯಿಂದ ಹಾಗೆ ತೋರುವುದು. ಹಾಗೆಯೇ ವಸ್ತುತಃ ಬ್ರಹ್ಮಾತ್ಮನು ಪರಿಣಾಮಗೊಳ್ಳದಿದ್ದರೂ ಸ್ವಯಂವಿಕಾರಿಯಾದ ಪ್ರೇಕ್ಷಕ ಪ್ರಮಾತೃ ಮನುಷ್ಯನಿಗೆ ಭ್ರಮೆಯಿಂದ ಜಗದ್ವಸ್ತುಗಳು ಬಿಡಿಬಿಡಿಯಾಗಿ ತೋರುವುವು. ಪ್ರಪಂಚದಲ್ಲೆಲ್ಲಾ ಬ್ರಹ್ಮಾತ್ಮನು ತುಂಬಿ ಸರ್ವವ್ಯಾಪ್ತನಾಗಿರುವುದರಿಂದಲೂ, ಜೀವರಿಗೆ ಪೂರ್ವ ಕರ್ಮಫಲ ಪ್ರಾಪ್ತವಾಗಲು ಬ್ರಹ್ಮನೇ ಸಕಲ ಪದಾರ್ಥಗಳಲ್ಲಿ ಸತ್ತಾಸ್ಫೂರ್ತಿ ಅಂದರೆ ಇರುವ ತೋರುವ ರೂಪದಿಂದ ಪರಿಪೂರ್ಣನಾಗಿರುತ್ತಾನಾದ್ದರಿಂದಲೂ ಅಜ್ಞಾನಿಗಳ ದೃಷ್ಟಿಯಲ್ಲಿ ಜಗತ್ತು ಸತ್ಯವಾಗಿಯೇ ಇದೆ ಎಂದು ತೋರುವುದು ಸ್ವಾಭಾವಿಕವಾಗಿದೆ. ಈ ಜಾಗರ ಪ್ರಪಂಚವನ್ನೇ ವ್ಯವಹಾರ = ಸಾಮಾನ್ಯಾನುಭವ ಎನ್ನುವುದು. ಇದು ಸತ್ಯ ಪರಮಾರ್ಥವಾಗಿರುವುದಿಲ್ಲ.

ವೇದದಲ್ಲಿ ಭೇದವಾದ = ದ್ವೈತ ಮತವನ್ನು ನಿಂದಿಸಿ ಅಭೇದವನ್ನು = ಅದ್ವೈತವನ್ನು ಸ್ತುತಿಸಿರುವುದರಿಂದ ಅದ್ವೈತವೇ ಶ್ರುತಿಯ ಸಿದ್ಧಾಂತವಾಗಿದೆ. ಹೀಗೆ ಅದ್ವೈತವನ್ನು ಹೇಳಿಯೂ ಈ ಭೇದ ತೋರುವ ಪ್ರಪಂಚ ಸೃಷ್ಟಿವರ್ಣನೆ ಇರವುದರ

ಪ್ರಶಂಸಿಸಿರುವುದರಿಂದ

ಅಭಿಪ್ರಾಯವೇನೆಂದರೆ ಕಾರ್ಯಕಾರಣಗಳ ಅಭೇದ ತಿಳಿಸುವುದೇ ಮತ್ತು ಅಭೇದವನ್ನು ಗಟ್ಟಿಗೊಳಿಸುವುದೇ ವೇದ ತಾತ್ಪರ್ಯ ಎಂದು ತಿಳಿಯಬೇಕು. ಅಂದಾಗ ಈ ಪ್ರಪಂಚಕ್ಕೆ ಕಾರಣವಾದ ಬ್ರಹ್ಮ- ಈಶ್ವರನಿಂದ ಕಾರ್ಯ ಪ್ರಪಂಚವು ಬೇರೆ ಅಲ್ಲ. ಸಕಲ ಪ್ರಪಂಚ ಕಾರ್ಯಗಳೂ ಕಾರಣಾಧಿಷ್ಠಾನವಾದ ಬ್ರಹ್ಮ ಅಭಿನ್ನವೇ ಆಗಿರುವುದೆಂದು ತಾತ್ಪರ್ಯ. ಆದ್ದರಿಂದಲೇ ಸರ್ವಂ ಖಲ್ವಿದಂ ಬ್ರಹ್ಮ ಎಂದಿದೆ. ಈಶ್ವರ-ಜೀವ ಇತರ ಬೇರೆಬೇರೆ ಅಲ್ಲ. ಎಂದು ಸಿದ್ಧಾಂತ.

ಹೀಗೆ ಸೃಷ್ಟವಾದ ಜಗತ್ತು ಮೂರು ಬಗೆಯಾಗಿರುತ್ತದೆ. ೧. ಆಧ್ಯಾತ್ಮಿಕ = ದೇಹೇಂದ್ರಿಯಾದಿಗಳು. ೨. ಆಧಿದೈವಿಕ = ಅಗ್ನಿವಾಯುವರುಣಾದಿ ದೇವತೆಗಳು. ೩. ಆಧಿಭೌತಿಕ = ಭೂಮಿಜಲಾದಿ ಪಂಚಭೂತಗಳು ಮತ್ತು ಅವುಗಳ ಗುಣಗಳು. ಈ ಮೂರು ಬಗೆಯ ಸೃಷ್ಟಿಯು ಬ್ರಹ್ಮನೆಂಬ ಸಮ ಸಮಾನ ದೇಶಕಾಲಗಳಲ್ಲೇ ಇದ್ದುಕೊಂಡಿರುತ್ತವೆ. ಬ್ರಹ್ಮವಲ್ಲದೇ ಬೇರೆಯಾಗಿ ದೇಶವೆಂಬುದೂ ಇಲ್ಲ, ಕಾಲವೆಂಬುದೂ ಇರುವುದಿಲ್ಲ. ದೇಶ ಮತ್ತು ಕಾಲ ಇವೆಲ್ಲವೂ ಮಾಯಾಕೃತವೇ, ಮಿಥ್ಯೆಯೇ. ಮಣ್ಣಿನಿಂದ ಮಡಿಕೆ, ನೂಲಿನಿಂದಬಟ್ಟೆ, ಚಿನ್ನದಿಂದ ಒಡವೆ, ಎಳ್ಳಿನಿಂದ ಎಣ್ಣೆ, ಹಾಲಿನಿಂದ ಮೊಸರು, ಬೆಣ್ಣೆ ತುಪ್ಪ, ಭೂಮಿಯಿಂದ ಗಿಡಮರಗಳು, ಶರೀರದಲ್ಲಿ ಉಗುರು, ಕೂದಲು ಎಂಬಂತೆ ಬ್ರಹ್ಮನಿಂದ ಸಾಮಾನ್ಯ ಮೊದಲ್ಗೊಂಡು ವಿಶೇಷ ಪರ್ಯಂತವಾಗಿ ಚರಾಚರ ಸಮಸ್ತ ವಿಶ್ವವೂ ಉಂಟಾಗಿವೆ. ಗಡಿಗೆಯಲ್ಲಿ ಮಣ್ಣು ವ್ಯಾಪಿಸಿಕೊಂಡಿರುವಂತೆ ಚೇತನಾತ್ಮನು ಚರಾಚರ ಪ್ರಪಂಚದಲ್ಲೆಲ್ಲಾ ಅನ್ತರ್ಯಾಮಿಯಾಗಿ ಪ್ರಾಣಿಗಳಲ್ಲಿ ಜೀವರೂಪದಿಂದಲೂ ನಾಮರೂಪ ಭೂ ಜಲಾದಿಗಳಲ್ಲಿ ಸತ್ತಾ-ಸ್ಫೂರ್ತಿರೂಪದಿಂದಲೂ ತುಂಬಿರುವನು. ಈ ಆತ್ಮನೇ ದೇಹಾದಿಗಳ ಅಧ್ಯಾಸದಿಂದ ನಾನು ಮನುಷ್ಯ, ಕರ್ತೃ, ಭೋಕ್ತೃ ಎಂದು ನಂಬಿಕೊಂಡಿದ್ದರೆ ಆತ್ಮ ಸ್ವರೂಪವನ್ನು ಅರಿಯದಿದ್ದರೆ ಸಂಸಾರಿಯಾಗಿರುವನು. ಇವನೇ ತನ್ನ ನಿಜ ಸ್ವರೂಪವನ್ನು ಅರಿತುಕೊಂಡರೆ ಬ್ರಹ್ಮನೇ = ಮುಕ್ತನೇ ಆಗಿರುವನು ಅವನ ಕರ್ಮಗಳೆಲ್ಲವೂ ತತ್ತ್ವಜ್ಞಾನಾಗ್ನಿಯಿಂದ ಭಸ್ಮವಾಗುವವು ಎಂದು ತಿಳಿದುಕೊಳ್ಳಬೇಕು. ಇದೇ ತತ್ತ್ವಜ್ಞಾನದಿಂದ ಆಗುವ ಮೋಕ್ಷವು ಇಂತಹ ಜ್ಞಾನಿಯು ಈ ಲೋಕದಲ್ಲಿ ಮತ್ತೆ ಹುಟ್ಟುವುದಿಲ್ಲ. ಮುಕ್ತನಾಗುವನು. ಗಡಿಗೆಯು ಮಣ್ಣಿಗಿಂತ ಬೇರೆಯಾಗಿ ಪೃಥಕ್ ಸ್ವತಂತ್ರ ವಸ್ತುವಲ್ಲ. ವಿಕಾರಮಾತ್ರವಾಗಿದೆ. ಅದು ನಿಜದಲ್ಲಿ ಕೇವಲ ಮಣ್ಣೇ ಆಗಿರುವುದಷ್ಟೆ! ಆ ವಿಕಾರವು ಗಡಿಗೆ ಎಂಬ ಹೆಸರಿಗೆ ಮಾತ್ರ, ಜೀವಾತ್ಮರ ವ್ಯವಹಾರಕ್ಕೆ ಮಾತ್ರ = ಜೀವರ ಜೀವನೋಪಾಯಕ್ಕೆ ಮಾತ್ರ ——

ಕಾರಣವಾಗುವುದು. ಅಂದರೆ ನಾಮರೂಪ ವಸ್ತುಗಳೆಲ್ಲವೂ ವ್ಯಾವಹಾರಿಕ ಸತ್ಯಮಾತ್ರವಾಗಿರುತ್ತವೆ. ಪಾರಮಾರ್ಥಿಕ ಸತ್ಯವಲ್ಲ. ಸ್ವಪ್ನದಂತೆ ಮಿಥ್ಯೆ ಎಂದು ತಿಳಿಯಬೇಕು. ಹೀಗೆ ತರ್ಕ ನ್ಯಾಯ ಅನುಭವ ಪ್ರಕಾರ ಚರಾಚರ ಜಗತ್ತೆಲ್ಲವೂ ವಿಚಾರಮಾಡಿಕೊಳ್ಳುವ ಮನುಷ್ಯನೂ ಸೇರಿ ಸಕಲ ನಾಮರೂಪಗಳೂ ಪಾರಮಾರ್ಥಿಕವಾಗಿ ಬ್ರಹ್ಮವೇ ಆಗಿರುವುದೆಂದು ತಿಳಿಯಬೇಕು. ಹೀಗೆ ಪರಿಣಾಮವಾದ ಎಂಬ ಪ್ರಕ್ರಿಯೆಯಿಂದ ವಿಶ್ವವು ಬ್ರಹ್ಮವೇ ಎಂದು ಪ್ರತಿಪಾದಿಸಿರುತ್ತೆ.

ಇನ್ನು ವಿವರ್ತವಾದವೆಂಬ ಪ್ರಕ್ರಿಯೆಯಿಂದ ವಿಚಾರಮಾಡಿದಾಗಲೂ ಹೀಗೆಯೇ ನಿರ್ಣಯವಾಗುವುದು. ಹೇಗೆಂದರೆ – ಆರೋಪಾಧಿಷ್ಠಾನವು ಅಂದರೆ ಕಾರಣ ವಸ್ತುವು ವಿಕಾರಗೊಳ್ಳದೇ ಅದರಲ್ಲಿ ಬೇರೊಂದು ಬಗೆಯ ಕಾರ್ಯೋದ್ಭವವಾಗಿ ತೋರಿಕೊಳ್ಳುವುದೆಂಬುವುದೇ ವಿವರ್ತವಾದ ಮತಸಾರವು. ಇದಕ್ಕೆ ಸ್ವಪ್ನ, ಇಂದ್ರಜಾಲ, ಮರುಜಲ, ರಜ್ಜುಸರ್ಪ, ಶುಕ್ತಿರಜತ ಮುಂತಾದ ಕಡೆಯೇ ದೃಷ್ಟಾಂತ, ಬಿಸಿಲುಝಳದ ಮರುಭೂಮಿಯಲ್ಲಿ ನೋಡುವವನಿಗೆ ನೀರು ತೋರುವುದು. ಹುಟ್ಟಿರುವುದು ತಾನೆ ತೋರುವುದು. ಅಂದಾಗ ಮರುಭೂಮಿಯಲ್ಲಿ (ಕಾರಣಾಧಿಷ್ಠಾನದಲ್ಲಿ) ನೀರು ಕಾಣುವಾಗ ನೀರು ಹುಟ್ಟಿರುವುದೆಂದು ಒಪ್ಪಬೇಕು. ಅಲ್ಲಿ ನೀರೆಂಬ ಕಾರ್ಯೋದ್ಭವವಾಗಿ ತೋರುತ್ತಿದ್ದರೂ ಆಗ ನಿಜವಾಗಿ ಮರುಭೂಮಿಯಲ್ಲಿ ವ್ಯತ್ಯಾಸ-ವಿಕಾರವೇನೂ ಉಂಟಾಗಿರುವುದಿಲ್ಲ. ಆದ್ದರಿಂದ ಅಲ್ಲಿ ನೀರು ತೋರಿದರೂ ಆ ನೀರಿನ ಅನುಭವವು ಭ್ರಮೆಯಾಗಿರುತ್ತದೆ. ನೀರೂ ಮಿಥ್ಯೆಯಾಗಿರುತ್ತದೆ. ಆಗ ನೋಡುವ ಮನುಷ್ಯನಲ್ಲಿ ದೋಷ - ನ್ಯೂನತೆ ಇರುವುದರಿಂದ ಅವನಿಗೆ ನೀರು ಎಂಬ ಮಿಥ್ಯಾಜ್ಞಾನ-ಭ್ರಾಂತಿಜ್ಞಾನವು ಉಂಟಾಗುವುದು. ಆಗ ನೋಡುವವನಿಗೆ ಇದು ಬರೀ ಬಯಲು ಎಂಬ ಜ್ಞಾನವಿರುವುದಿಲ್ಲ ಮತ್ತು ನೀರಿನ ಆಸೆ ಇರುತ್ತದೆ. ಈ ದೋಷದಿಂದ ಭ್ರಾಂತಿಯುಂಟಾಗುವುದು. ಸ್ವಪ್ನವನ್ನು ನೋಡುವ ಕಲ್ಪಿತ ಪ್ರಮಾತೃವಿನಲ್ಲಿ ಅಜ್ಞಾನ ಮತ್ತು ರಾಗದ್ವೇಷ ತಮೋಜ್ಞಾನ ದೋಷವಿರುವುದು. ಭ್ರಾಂತಿಸ್ಥಳಗಳಲ್ಲೆಲ್ಲಾ ಅಧಿಷ್ಠಾನದ ಅಜ್ಞಾನದೋಷವು ಇದ್ದೇ ಇರುವುದು. ಅಂದರೆ ಅಧಿಷ್ಠಾನದ (ಕಾರಣದ) ಜ್ಞಾನವಿರುವುದೇ ಇಲ್ಲ. ಕನಸು ಕಾಣುವಾಗ ಅವನಿಗೆ ಆತ್ಮನ ಜ್ಞಾನವಿರುವುದಿಲ್ಲ. ಆದರೆ ಕನಸಿಗೆ ಅಲ್ಲಿ ಆತ್ಮನೇ ಕಾರಣ. ಆತ್ಮನಲ್ಲೇ ಕನಸು ತೋರುವುದು. ಆತ್ಮನಲ್ಲಿ

ಏನೊಂದೂ ವ್ಯತ್ಯಾಸವುಂಟಾಗಿರುವುದಿಲ್ಲ. ಸ್ವಪ್ನವನ್ನು ಅನುಭವಿಸಿದವನು ನಿಜ. ಕಂಡ ಸ್ವಪ್ನವು ಮಿಥ್ಯೆ. ದೃಶ್ಯವು ತೋರುವಾಗ ಯಾವಾಗಲೂ ಸತ್ಯವೆಂದು ತೋರುವುದೇ ಸ್ವಭಾವ. ಏಕೆಂದರೆ ತೋರುವುದು ಎಂಬುದು ಸ್ಫೂರ್ತಿ =ಪ್ರಕಾಶ ಆತ್ಮ ಪ್ರಕಾಶಜ್ಞಾನವೇ ಆಗಿರುತ್ತದೆ. ಅದು ಆತ್ಮನ ಸ್ವರೂಪವೇ ಸ್ವಭಾವವೇ ಆಗಿರುತ್ತದೆ. ಆದ್ದರಿಂದ ಎಚ್ಚರಕ್ಕೂ ಸ್ವಪ್ನಕ್ಕೂ ವ್ಯತ್ಯಾಸವೇ ಇರುವುದಿಲ್ಲ. ಈ ಎರಡೂ ಒಂದೇ ಬಗೆಯಾಗಿರುತ್ತೆ. ಕತ್ತಲೆಯನ್ನು ನೋಡುವಾಗ ಆ ಕತ್ತಲೆಗೆ ನೋಡುವವನೇ ಸತ್ತೆಯನ್ನು = ಸ್ಥಿತಿಯನ್ನು ಕೊಟ್ಟುಕೊಂಡಿರುತ್ತಾನೆ. ಹಾಗೆಯೇ ಸ್ವಪ್ನ ಮತ್ತು ಎಚ್ಚರದಲ್ಲಿ ದೃಶ್ಯ ನಾಮರೂಪಗಳಿಗೆ ಪ್ರಮಾತೃವೇ ಸ್ಥಿತಿಯನ್ನು ಕೊಟ್ಟುಕೊಂಡಿರುತ್ತಾನೆಂದು ತಿಳಿಯಬೇಕು. ಈ ಎರಡು ಅವಸ್ಥೆಗಳಲ್ಲೂ ಪ್ರೇಕ್ಷಕನಿಗೆ ಆತ್ಮಾಜ್ಞಾನದೋಷವಿದ್ದೇ ಇರುತ್ತದೆ. ಕಾರಣ = ಅಧಿಷ್ಠಾನದ (ಆತ್ಮನ) ಜ್ಞಾನವಿರುವುದಿಲ್ಲ. ಆದ್ದರಿಂದ ಜಾಗ್ರತ್ ಸ್ವಪ್ನ ಇವೆರಡೂ ಸಮಾನವೇ ಆಗಿರುತ್ತವೆ. ಎರಡು ಅವಸ್ಥೆಗಳೂ ಮಿಥ್ಯೆಯೇ ಎಂದು ತಿಳಿಯಬೇಕು. ಈ ಅವಸ್ಥೆಗಳಲ್ಲಿ ನಿಜಾತ್ಮನ ಪ್ರತಿಬಿಂಬರೂಪದ ಚಿದಾಭಾಸನೆಂಬ ಪ್ರಮಾತೃವು ಮಿಥ್ಯಾತ್ಮನು ವಿಕಾರಕ್ಕೊಳಗಾಗಿದ್ದರೂ ಬಿಂಬರೂಪದ (ಸಾಕ್ಷಿರೂಪದ) ಪ್ರತ್ಯಗಾತ್ಮನು ವಿಕಾರಿಯಾಗಿರುವುದಿಲ್ಲ. ಶುದ್ಧನಾಗಿಯೇ ಇರುತ್ತಾನೆ. ಅವನೇ ಕಾರಣ ಅಧಿಷ್ಠಾನ ಸತ್ಯವಸ್ತುವಾಗಿರುತ್ತಾನೆ. ಸ್ವಪ್ನಕಾಲವು ಹೋಗಿ ಎಚ್ಚರವಾಗಲು ಸ್ವಪ್ನಪದಾರ್ಥಗಳು ಹೇಗೆ ಹುಸಿಯೋ ಹಾಗೆಯೇ ಎಚ್ಚರದ ಕಾಲವು ಹೋಗಿ ಅಂದರೆ ಪ್ರತ್ಯಗಾತ್ಮನ ತತ್ತ್ವಜ್ಞಾನವಾದಾಗ = ಪರಮಾರ್ಥ ಸತ್ಯದ ಅರಿವು ಆದಾಗ ಎಚ್ಚರದಲ್ಲಿ ಎಚ್ಚರವಾಗಲು ಜಗತ್ಪದಾರ್ಥಗಳೆಲ್ಲವೂ ಹುಸಿ=ಮಿಥ್ಯಾ ಆಗಿರುತ್ತವೆಂದು ಗೊತ್ತಾಗುವುದು. ಹಾಗೆಂದು ನಿಶ್ಚಯ ಮಾಡಿಕೊಳ್ಳಬೇಕು. ಹೀಗೆ ವಿಚಾರ ಪ್ರಮಾಣದಿಂದ ಬ್ರಹ್ಮಸತ್ಯಂ ಜಗನ್ಮಿಥ್ಯಾ ಎಂದು ನಿರ್ಣಯವಾಗುವುದು. ಹೀಗೆ ನಿರ್ಣಯ = ಅನುಭವ ಮಾಡಿಕೊಳ್ಳುವುದೇ ಸಮ್ಯಗ್ ಜ್ಞಾನವು. (ದೃಶ್ಯಪ್ರಲಯವಲ್ಲ) ಇದೇ ಪರಮಾರ್ಥ ಸತ್ಯಜ್ಞಾನಾನುಭವವು. ಮೋಕ್ಷಕ್ಕೆ ಪ್ರಪಂಚಲಯ ಆಗಬೇಕಾದುದಿಲ್ಲ.

ಈಶ್ವರನು ಮಾಯೆಯಿಂದ ಜಗತ್ತನ್ನು ಸೃಜಿಸಿರುವನೆಂದು ಹಿಂದೆಯೇ ಪ್ರತಿಪಾದಿಸಿದೆ. ಐಂದ್ರಜಾಲಿಕ ದೃಶ್ಯದಲ್ಲಿ ಮಾಯೆಯಿಂದ ಮಂತ್ರವಾದಿಯೇ ತುಂಬಿರುವಂತೆ ಜಗತ್ತಿನಲ್ಲಿ ಮಾಯೆಯಿಂದ ಬ್ರಹ್ಮೇಶ್ವರನೇ ವ್ಯಾಪಿಸಿ ತುಂಬಿರುವನು.

ಆದ್ದರಿಂದಲೇ ಜಾಗರ ಮತ್ತು ಸ್ವಪ್ನ ಅವಸ್ಥೆಯಲ್ಲಿರುವ ಪ್ರೇಕ್ಷಕ ಪ್ರಮಾತೃಗಳಿಗೆ ಪ್ರಪಂಚವು ಇರುವುದೆಂದು ತೋರುತ್ತಿರುವುದು. ಅಮುಕ್ತರಾದ ಜೀವರು ಧರ್ಮಕರ್ಮಗಳನ್ನು ಮಾಡಿರುತ್ತಾರಾದರಿಂದ ಅವರಿಗೆ ಪುಣ್ಯ ಪಾಪಕರ್ಮಗಳಿಗೆ ತಕ್ಕ ಫಲವನ್ನು ಕೊಡಬೇಕಾದ ಪ್ರಭು - ಈಶ್ವರನು ಮಾಯೆಯಿಂದಲೇ ಶಬ್ದ ನಾಮ ರೂಪಾದಿ ಭೋಗ್ಯ ವಸ್ತುಗಳನ್ನು ಸೃಜಿಸಿ, ಜೀವರಿಗೆ ಒದಗಿಸಿಕೊಟ್ಟಿರುವನು. (ಹೀಗಿರುವುದು ಜಗತ್ಸೃಷ್ಟಿ.) ಮಾಯೆಯಿಂದಾದ ಪದಾರ್ಥಕ್ಕೆ ಸ್ವಯಂ ಸತ್ತ್ವವಿರುವುದಿಲ್ಲ. ಕನಸಿನ ಪದಾರ್ಥಕ್ಕೆ ಮತ್ತು ಕತ್ತಲೆಗೆ ಸ್ವಯಂ ಸತ್ತ್ವವಿರುವುದಿಲ್ಲ. ಹೀಗೆಯೇ ರಜ್ಜುಸರ್ಪ, ಮರುಜಲ ಮುಂತಾದ ಭ್ರಾಂತಿಸ್ಥಳಗಳಲ್ಲೆಲ್ಲಾ ಪ್ರೇಕ್ಷಕಾತ್ಮನೇ ಆ ಕಾಲದಲ್ಲಿ ಆ ದೃಶ್ಯಪದಾರ್ಥಗಳಿಗೆ ಸತ್ತ್ವವನ್ನು ಕೊಟ್ಟಿರುತ್ತಾನೆಂದು ತಿಳಿಯಬೇಕು. ಅಂದರೆ ಜಾಗ್ರತ್ ವ್ಯವಹಾರವೆಂಬ ಸ್ಥಿರಸ್ವಪ್ನಸ್ಥಿತಿಯಲ್ಲಿ ಜೀವರ ಪೂರ್ವಕೃತ ಕರ್ಮಶಕ್ತಿಯೇ ಜಗತ್ ಪದಾರ್ಥವಾಗಿ ಪರಿಣಮಿಸಿ ಬ್ರಹ್ಮಾತ್ಮನಿಂದ ಸತ್ತ್ವವನ್ನು ಪಡೆದುಕೊಂಡು ಆಯಾಯಾ ದೇಶಕಾಲಗಳಲ್ಲಿ ಆಯಾಯಾ ಕರ್ತೃಗಳಿಗೆ ಭೋಗ್ಯವಸ್ತುರೂಪವಾಗಿ ಪ್ರಾಪ್ತವಾಗಿರುವುದೆಂದು ತಿಳಿಯಬೇಕು. ಇದನ್ನೇ ಶಾಸ್ತ್ರದಲ್ಲಿ ಸ್ವಭಾವಃ ಪ್ರವರ್ತತೆ ಎಂದು ತಿಳಿಸಿದೆ. ಜಗತ್ಸೃಷ್ಟಿಯು ಮಾಯೆಯಾದ್ದರಿಂದ ಈಶ್ವರನ ದೃಷ್ಟಿಯಿಂದ ನೋಡಿದಾಗ ಜಗತ್ತು ಇರುವುದೇ ಇಲ್ಲ. ಕೇವಲ ಬ್ರಹ್ಮ ಒಂದೇ ಇರುವುದು. ಬ್ರಹ್ಮಾತ್ಮನೇ ಈಶ್ವರನಿರುತ್ತಾನೆ. ಕರ್ಮ ಶೇಷವುಳ್ಳ ಅಜ್ಞಾನಿಗಳಾದ ಜೀವರ ದೃಷ್ಟಿಯಲ್ಲಿ ಅವರ ಕರ್ಮಫಲವಾದ ಜಗತ್ಸೃಷ್ಟಿ ಆಗಿದೆ. ವ್ಯಾವಹಾರಿಕ ಸತ್ಯವಾಗಿದೆ. ಈ ಜಗತ್ತು ಸದಸದ್ ವಿಲಕ್ಷಣವಾಗಿದೆ. ಅಂದರೆ ಬ್ರಹ್ಮವಸ್ತುವಂತೆ ಸತ್ಯವಲ್ಲ. ಮೊಲದ ಕೊಂಬಿನಂತೆ ಅಸತ್ಯ ಅಲ್ಲ. ಅಂದರೆ ಕನಸಿನಂತೆ ಮಿಥ್ಯೆ. ಜಗತ್ತಿಗೆ ವ್ಯಾವಹಾರಿಕಸತ್ತೆಯು ಇರುವುದು. ಇದು ಸಾಪೇಕ್ಷಸತ್ಯ = ವ್ಯಾವಹಾರಿಕ ಸತ್ಯಮಾತ್ರ. ಪಾರಮಾರ್ಥಿಕ ಸತ್ಯವಲ್ಲ. (ಪುರುಷಾರ್ಥಕ್ಕೆ ಸಾಧನವಾಗಿರುವುದು ಕೇವಲ ಪ್ರಾತಿಭಾಸಿಕವಲ್ಲ = ಕ್ಷಣಿಕ ಸ್ವಪ್ನದಂತಲ್ಲ). ಇಂತಹ ವ್ಯಾವಹಾರಿಕ ಪ್ರಪಂಚದಲ್ಲಿ ಸ್ವ ಸ್ವ ಕರ್ಮಫಲಗಳನ್ನನುಭವಿಸಲು ಜನ್ಮಪಡೆದಿರುವ ಜೀವರು ತಮ್ಮ ನಿಜಸ್ವರೂಪವನ್ನರಿಯದೇ, ಮೌಢ್ಯದಿಂದ ತಮ್ಮನ್ನೇ ಮರೆತುಕೊಂಡು ನಾಮರೂಪ ಜಗತ್ತು ಸತ್ಯ ಎಂದು ನಂಬಿಕೊಂಡು ಲೋಕವ್ಯವಹಾರದಲ್ಲೇ ಮಗ್ನರಾಗಿ ಮತ್ತೆ ಮತ್ತೆ ಪುಣ್ಯಕರ್ಮ ಪಾಪಕರ್ಮಗಳನ್ನು ಮಾಡುತ್ತಾ, ಸುಖ - ದುಃಖಗಳನ್ನನುಭವಿಸುತ್ತಾ, ಹುಟ್ಟುತ್ತಾ, ಸಾಯುತ್ತಾ

ವಿಕಾರಿಗಳಾಗಿರುತ್ತಾರೆ. ಇದುವೇ ಸ್ಥಿರ ದೀರ್ಘಸ್ವಪ್ನ ಎಂದು ಹಿಂದೆ ವಿವರಿಸಿದೆ. ಸ್ವಪ್ನವು ಹೋಗಿ ಎಚ್ಚರವಾದಾಗ ಸ್ವಪ್ನವೆಲ್ಲಾ ಹೇಗೆ ಹುಸಿಯೋ, ಹಾಗೆಯೇ ತತ್ತ್ವಜ್ಞಾನ - ವಿಜ್ಞಾನರೂಪದ ಸತ್ಯಪರಮಾರ್ಥಾನುಭವ ಮಾಡಿಕೊಂಡಾಗ = ಜೀವರಿಗೆ ಎಚ್ಚರದಲ್ಲಿ ಎಚ್ಚರವಾಗಿ ಸಮ್ಯಗ್ ಜ್ಞಾನವು ದೃಢಾನುಭವರೂಪವಾದಾಗ ಈ ಜಗತ್ತು ಮಿಥ್ಯಾ. ಇರುವುದೇ ಇಲ್ಲ. ಬ್ರಹ್ಮ ಒಂದೇ ಇರುವುದು ಗೊತ್ತಾಗುವುದು. ಈ ರೀತಿ ವಿವರ್ತವಾದ ಪ್ರಕ್ರಿಯೆಯಿಂದಲೂ ಈ ಸಮಸ್ತ ಜಗತ್ತು ಬ್ರಹ್ಮವೇ ಎಂದು ಸಮರ್ಥಿಸಿ ನಿಶ್ಚಯವಾಗುವುದು. ಹೀಗೆಂದರಿತು ಕೊಂಡು ಜಿಜ್ಞಾಸು ಮನುಷ್ಯನು ಮೋಹನಿದ್ದೆಯನ್ನು ಬಿಟ್ಟು (ಮೂಲಾಜ್ಞಾನವನ್ನು ಇಲ್ಲವಾಗಿಸಿಕೊಂಡು) ಎಚ್ಚೆತ್ತುಕೊಳ್ಳುವನು. ಓಹೋ ನಿಜ ಗೊತ್ತಾಯಿತು ಎಂದುಕೊಳ್ಳುವನು. ಇದೇ ಅನುಸ್ಮೃತಿಯು. ಆಗಲೇ ಸ್ಥಿರಸ್ವಪ್ನವು ಅಡಗುವುದು. ಈ ಜಗತ್ತೆಂಬ ಮಾಯೆಯೂ (ದೇವಮಾಯೆಯೇ ಮಾಯವಾಗಿ) ಇಲ್ಲವಾಗುವುದು. ಮುಕ್ತಿ ಪ್ರಮೇಯದಲ್ಲಿ ನಾಮರೂಪಗಳೇನೂ ವಿಲಯವಾಗಬೇಕಾಗಿಲ್ಲ, ಲಯವಾಗುವುದೂ ಇಲ್ಲ.

ಈ ರೀತಿ ವಿಚಾರಪೂರ್ವಕವಾಗಿ ವಿವರಿಸಿರುವಂತೆ ನಾಲ್ಕು ವಾಕ್ಯಗಳ ಅರ್ಥವನ್ನು ಪುನಃ ಪುನಃ ಮನನಮಾಡಿಕೊಂಡು ನಿಶ್ಚಯಜ್ಞಾನವು ದೃಢವಾದರೆ, ಜಿಜ್ಞಾಸುಗಳು ಮೋಹನಿದ್ದೆಬಿಟ್ಟು ಎಚ್ಚತ್ತುಕೊಂಡರೆ ಅವರಿಗೆ (ಎಚ್ಚರದಲ್ಲಿ ಎಚ್ಚರವಾಗಿ = ಸ್ಥಿರಸ್ವಪ್ನವು ಮಾಯವಾಗಿ) ಅಂತಹ ಅಧಿಕಾರೀ ಮನುಷ್ಯ ಪ್ರಮಾತೃಗಳಿಗೆ ತಮ್ಮಲ್ಲಿ ಸ್ವಯಮೇವ ಏನೆಂದು ಜ್ಞಾನ-ಪ್ರಬೋಧವುಂಟಾಗುವುದೋ ಆ ಫಲಿತಾಂಶವನ್ನೇ ಈ ಐದನೆಯ ವಾಕ್ಯವು ಅನುವಾದಿಸುವುದು. ಅಹಂ ಬ್ರಹ್ಮಾಸ್ಮಿ = ನಾನು ಬ್ರಹ್ಮವೇ ಆಗಿದ್ದೇನೆ ಎಂದು ಸ್ಮರಣೆಯು ಉಂಟಾಗುವುದು. ನಾನು = ಆತ್ಮನು ಸಂಸಾರೀ ಮರ್ತ್ಯನಲ್ಲ. ನಿತ್ಯ ಶುದ್ಧ ಬುದ್ಧ ಮುಕ್ತ ಬ್ರಹ್ಮವೇ = ಪರಮಾತ್ಮನೇ ಎಂದು ಅರಿವಾಗುವುದು. ಇದೇ ಅನುಸ್ಮೃತಿಯು. ದೇವೇಶ್ವರನಾದ ಬ್ರಹ್ಮಚೈತನ್ಯನ ಸ್ವಭಾವ ಸ್ವರೂಪಲಕ್ಷಣವೂ, ತತ್ತ್ವಪರಮಾರ್ಥವನ್ನರಿತ ಜಿಜ್ಞಾಸು ಮನುಷ್ಯನ ನಿಜಾತ್ಮನ ಸ್ವಭಾವ ಸ್ವರೂಪಲಕ್ಷಣವೂ ಒಂದೇ ಬಗೆಯಾಗಿರುವುದರಿಂದಲೂ, ಬ್ರಹ್ಮಾತ್ಮನೊಬ್ಬನೇ ಸತ್ಯವಾಗಿರುವುದರಿಂದಲೂ ಅದ್ವೈತವೇ ನಿತ್ಯ ಸಹಜವಾಗಿರುವುದರಿಂದಲೂ ಅಂತಹ ತತ್ತ್ವಜ್ಞಾನಿಗೆ ಜಗನ್ಮಿಥ್ಯಾ ಎಂದೂ ಅರಿವಾಗುವುದು ಮತ್ತು ನಿಜ ಆತ್ಮನ ಲಾಭವಾದ ಸಾಕ್ಷಾದಪರೋಕ್ಷವಾಗಿ ಬ್ರಹ್ಮಸಿದ್ಧಿಯೇ = ಚೇತನ ಬ್ರಹ್ಮವೇ ಎಂದು ಅರಿವು ಆಗುವುದು. ಇದೇ

ಅನುಸ್ಮೃತಿಯು. ಇದೇ ಸಮ್ಯಗ್ ಜ್ಞಾನ. ಇದೇ ಪರಮಾರ್ಥ ಸತ್ಯದರ್ಶನ = ಸ್ವಾತ್ಮದರ್ಶನ = ಬ್ರಹ್ಮಜ್ಞಾನ. ಈ ಬ್ರಹ್ಮಜ್ಞಾನದಿಂದ ನರಮನುಷ್ಯನು ನಾರಾಯಣನಾಗಿ ಕೃತಕೃತ್ಯನೂ, ಧನ್ಯನೂ ಅಮೃತನೂ ಆಗುವನು. ಅವನು ಜ್ಞಾನಗಂಗಾಧರನೇ ಆಗಿರುತ್ತಾನೆ.

॥ ಓಂ ಶಾನ್ತಿಃ ॥

ಆತ್ಮಾ ಕ್ಷೇತ್ರಜ್ಞ ಇತ್ಯುಕ್ತಃ ಸಂಯುಕ್ತಃ ಪ್ರಾಕೃತೈರ್ಗುಣೈಃ । (ಕ್ಷೇತ್ರಜ್ಞ ಎಂದರೆ ಪ್ರಮಾತೃ ಅಥವಾ ಜೀವಾತ್ಮ)
ತೈರೇವ ತು ವಿನಿರ್ಮುಕ್ತಃ ಪರಮಾತ್ಮೇತ್ಯುದಾಹೃತಃ ॥
ಮುಕ್ತಿರ್ಹಿತ್ವಾಽನ್ಯಥಾಭಾವಂ ಸ್ವರೂಪೇಣ ವ್ಯವಸ್ಥಿತಿಃ ।
ಮೋಕ್ಷ ಎಂದರೆ ಪ್ರಮಾತೃಮನುಷ್ಯನು ಕಲ್ಪಿತ ವಿಕಾರ ರೂಪವನ್ನು ಬಿಟ್ಟು ತನ್ನ ನೈಜ ಸ್ವರೂಪವನ್ನು ಪಡೆದುಕೊಳ್ಳುವುದೇ.
ಅಸ್ತಿ ಭಾತಿ ಪ್ರಿಯಂ ನಾಮ ರೂಪಂ ಚೇತ್ಯಂಶಪಂಚಕಮ್ ।
ಆದ್ಯತ್ರಯಂ ಬ್ರಹ್ಮರೂಪಂ ಮಾಯಾರೂಪಮತೋ ದ್ವಯಮ್ ॥

| | | |
|---|---|---|
| ಅಹಮ್ ಅಸ್ಮಿ | = | ಪಂಚಕೋಶವ್ಯತಿರಿಕ್ತಃ = ಮನುಷ್ಯ ಎಂಬ ತಾನು ಅವುಗಳಿಗಿಂತ ಬೇರೆ |
| ಅಹಮ್ ಆತ್ಮಾ | = | ಅವಸ್ಥಾತ್ರಯ ಸಾಕ್ಷೀ = ಮನುಷ್ಯ ಎಂಬ ತಾನು ಜಡವಲ್ಲದ ಚೇತನ |
| ಅಯಮಾತ್ಮಾ ಬ್ರಹ್ಮ | = | ದೇಹತ್ರಯ ವಿಲಕ್ಷಣಃ = ಮನುಷ್ಯ ಎಂಬ ತಾನು ನಿತ್ಯಸತ್ಯಜ್ಞಾನ ಪ್ರಕಾಶ ಸ್ವರೂಪ |
| ಸರ್ವಂ ಖಲ್ವಿದಂ ಬ್ರಹ್ಮ | = | ಅದ್ವಿತೀಯ ಸಚ್ಚಿದಾನಂದ = ನಾನು ಮತ್ತು ಎಲ್ಲವೂ ಬ್ರಹ್ಮವಲ್ಲದಲ್ಲ |
| ಅಹಂ ಬ್ರಹ್ಮಾಸ್ಮಿ | = | ಸರ್ವೋಪಪ್ಲವರಹಿತೋ ನಿತ್ಯ ಶುದ್ಧ ಬುದ್ಧ ಮುಕ್ತಸ್ವಭಾವೋ ವಿಜ್ಞಾನಘನಃ ಪ್ರತ್ಯಗರ್ಥೋ ಬ್ರಹ್ಮೈವಾಹಮಸ್ಮಿ. (ಇದೇ ನಿಶ್ಚಿತಾರ್ಥ) |

★★★

## ಸತ್ಯ ಪರಮಾರ್ಥ ಮತ್ತು ಜ್ಞಾನ ತತ್ತ್ವ ನಿರೂಪಣೆ

ಸರ್ವಜನರಿಗೂ ನಾನು, ತಾನು ಎಂಬ ಅರಿವು ಸ್ವಾಭಾವಿಕ ವಾಗಿರುವುದು. ಈ ಜ್ಞಾನವು ಯಾವಾಗಲೂ ಅಪರೋಕ್ಷವಾಗಿಯೇ ಇರುತ್ತದೆ. ಈ ಜ್ಞಾನಸ್ವರೂಪದ ಪ್ರತ್ಯಗಾತ್ಮನು ಸಾಕ್ಷಾತ್ ಬ್ರಹ್ಮವೇ ಆಗಿರುತ್ತಾನೆ. ಈ ತಾನು ಎಂಬ ಸ್ವಯಂಪ್ರಕಾಶ ನಿಜ ಆತ್ಮನು ಅನುಭವರೂಪವಾಗಿರುವುದರಿಂದ ನಿಜ ಸದ್ವಸ್ತುವೇ, ನಿತ್ಯ ಸತ್ಯವಾಗಿರುವಂತಹ ನೆಂದೇ ನಿಶ್ಚಯವಾಗುತ್ತದೆ. ಬ್ರಹ್ಮ = ಆತ್ಮನಲ್ಲಿ ಧರ್ಮ, ಜಾತಿ, ಗುಣ, ಕ್ರಿಯೆ, ಸಂಜ್ಞೆ, ಸಂಬಂಧ ಮುಂತಾದ ವಿಶೇಷವೇನೂ ಇಲ್ಲದಿರುವುದರಿಂದಲೇ ಆತ್ಮನು ನಿರಪೇಕ್ಷ ಸತ್ಯನಾಗಿರುತ್ತಾನೆ. ಕ್ರಿಯಾಕಾರಕ ಸಾಧನ ಸನ್ನಿಕರ್ಷಾದಿಗಳ ಅಪೇಕ್ಷೆಯಿಲ್ಲದೇ ಇರುವ ಈ ನಾನು = ತಾನು ಎಂಬ ಅಪರೋಕ್ಷಾನುಭವವೇ ನಿಜವಾದ ಜ್ಞಾನವಾಗಿರುತ್ತದೆ. ಹೀಗೆಂಬ ವಿಚಾರ ನಿಶ್ಚಯ ಪ್ರಮಾಣದಿಂದ ಗೊತ್ತಾಗುವುದೇನೆಂದರೆ - ಸತ್ಯವೇ ಜ್ಞಾನವು. ಜ್ಞಾನವೇ ಸತ್ಯವು. ಹೀಗೆ ಸತ್ಯ ಮತ್ತು ಜ್ಞಾನ ಇವಕ್ಕೆ ಅಭೇದವಿರುವುದರಿಂದ ಬ್ರಹ್ಮಾತ್ಮೈಕ್ಯ. ಅಖಂಡೈಕರಸತತ್ತ್ವವೇ = ಅದ್ವೈತಬ್ರಹ್ಮವೇ ಪರಮಾರ್ಥ ಸತ್ಯ ಎಂದು ಸಿದ್ಧವಾಗುವುದು. ಇದನ್ನು ಕಂಡುಕೊಳ್ಳುವುದಕ್ಕೆ ಇವನ್ನು ಮೂರು ಮೂರು ಬಗೆಯಾಗಿ ವಿಚಾರಿಸಿ ವಿವೇಚನೆ ಮಾಡಿಕೊಳ್ಳುವುದು ಸಹಾಯಕವಾಗಿದೆ.

೧. ವ್ಯಾವಹಾರಿಕ ಸತ್ಯ. ೨. ಪ್ರಾತಿಭಾಸಿಕ ಸತ್ಯ. ೩. ಪಾರಮಾರ್ಥಿಕ ಸತ್ಯ.

೧. ಸಾಮಾನ್ಯಾನುಭವ. ೨. ವಿಭಕ್ತಾನುಭವ. ೩. ವಿವಿಕ್ತಾನುಭವ.

ತಿಳಿವು, ಅರಿವು, ಜ್ಞಾನ, ಅನುಭವ ಎಂಬ ಮಾತುಗಳನ್ನು ಸಾಮಾನ್ಯವಾಗಿ ಒಂದೇ ಅರ್ಥದಲ್ಲಿ ವ್ಯವಹರಿಸುವರು. ಆದರೆ ಅಲ್ಲಿ ಒಂದು ಸೂಕ್ಷ್ಮ ಇರುವುದು. ಅರಿವು ಸ್ವಾಭಾವಿಕವಾಗಿರಬಹುದು. ಆದರೆ ಜ್ಞಾನವು = ತಿಳಿವು ಜಿಜ್ಞಾಸು ಪ್ರಮಾತೃವಿಗೆ ಪ್ರಮಾಣದಿಂದ ಉಂಟಾಗುವುದು. ಹೀಗೆ ಉಂಟಾದ ಜ್ಞಾನವು ನಿತ್ಯಾನಿತ್ಯ ವಿವೇಚನೆ ಮತ್ತು ಯುಕ್ತಿ ವಿಚಾರಗಳಿಂದ ನಿಶ್ಚಯ ರೂಪವಾದಾಗ = ವಿವೇಕ ರೂಪವಾದ ಅರಿವನ್ನೇ ವಿಜ್ಞಾನ ಎಂದೂ ಅನುಭವ ಎಂದೂ ತಿಳಿದುಕೊಳ್ಳಬೇಕು. ಇದನ್ನೇ ಸಮ್ಯಗ್ ಜ್ಞಾನ ಎನ್ನುವುದು.

೧. ವ್ಯಾವಹಾರಿಕ ಸತ್ಯ ಎಂದರೆ - ಜಾಗ್ರತ್ಕಾಲದ ವ್ಯವಹಾರದಲ್ಲಿ ಮನುಷ್ಯರು ತಮ್ಮ ಇಂದ್ರಿಯ ಪ್ರಮಾಣ ಮೂಲಕವಾಗಿ ತಿಳಿದುಕೊಳ್ಳುವ ವಸ್ತುವು ಮತ್ತು ಅದರ ಜ್ಞಾನವೂ

ಸತ್ಯವೆಂದು ಭಾವಿಸಲಾಗುವುದು. ಇದು ಹಸು, ಇದು ಕುದುರೆ ಎಂದು ಕಣ್ಣಿಂದ ನೋಡಿ ನಿಜವಾಗಿ ಇರುವುದರ ಜ್ಞಾನ ಮಾಡಿಕೊಳ್ಳುವುದು ಲೋಕದಲ್ಲಿ ಕಾಣುವ ವಿಷಯ. ಸಾಮಾನ್ಯವಾಗಿ ಎಲ್ಲರೂ ಒಪ್ಪುವಂತೆ ದೇಶ, ಕಾಲ, ಕ್ರಿಯೆ, ಕಾರಕ, ನಿಮಿತ್ತ, ಸಂಸರ್ಗ ಮುಂತಾದ ಸಾಮಗ್ರಿಗಳು ಇರುತ್ತಿದ್ದು, ಅರ್ಥಕ್ರಿಯಾಕಾರಿಯೂ, ಪುರುಷಾರ್ಥವೂ ಆಗಿರುತ್ತಿದ್ದರೆ ಹಾಗೆ ತಿಳಿದ ವಸ್ತುವನ್ನು ಮತ್ತು ಅದರ ಜ್ಞಾನವನ್ನು ಸತ್ಯ ಎಂದು ಹೇಳುತ್ತಾರೆ. ಇದೇ ವ್ಯಾವಹಾರಿಕ ಸತ್ಯದ ಲಕ್ಷಣವಾಗಿದೆ. ಜಾಗ್ರತ್ಕಾಲದ ಮನುಷ್ಯನಲ್ಲಿ ಸತ್ತ್ವಗುಣವೂ ರಜೋಗುಣವೂ ಪ್ರಧಾನವಾಗಿ ಚುರುಕಾಗಿರುತ್ತವೆ. ಆಗ ತಾನು ಸ್ವತಂತ್ರ ಎಂಬ ನಂಬಿಕೆಯುಳ್ಳ ಮನುಷ್ಯನು ಉದ್ದೇಶಪಟ್ಟು ವ್ಯವಹಾರದಲ್ಲಿ, ಜ್ಞಾನ ಕರ್ಮಗಳಲ್ಲಿ ತೊಡಗಿಕೊಂಡಿರುತ್ತಾನೆ. ಅಥವಾ ಹಿಮ್ಮೆಟ್ಟುತ್ತಾನೆ. ಅವನ ಪ್ರವೃತ್ತಿ ನಿವೃತ್ತಿಗಳಿಗೆ ಸಹಾಯಕವಾದ ದೇಹ ಇಂದ್ರಿಯ ಮನೋಬುದ್ಧಿಗಳು ಪಟುವಾಗಿರುತ್ತವೆ. ತರ್ಕ ನೀತಿಗಳ ಬೆಂಬಲವೂ ಇರುವುದು. ಈ ವಿಶಿಷ್ಟ ಸಾಮಗ್ರೀ ಸಂಪನ್ನನಾದ ಮನುಷ್ಯನು ತಾನು ಜ್ಞಾತಾ ಕರ್ತಾ ಭೋಕ್ತಾ ಎಂಬ ಅಭಿಮಾನವುಳ್ಳವನಾಗಿ ಪ್ರಮಾತೃವಾಗಿರುತ್ತಾನೆ. ಈ ಪ್ರಮಾತೃವು ತನ್ನ ಇಂದ್ರಿಯ ಪ್ರಮಾಣದಿಂದ ವಸ್ತುವನ್ನು ಗ್ರಹಿಸುತ್ತಾನೆ. ಅಂದರೆ ಜ್ಞಾನಮಾಡಿಕೊಳ್ಳುತ್ತಾನೆ. ಇಂತಿದು ವ್ಯಾವಹಾರಿಕ ಸತ್ಯವಾಗಿರುತ್ತದೆ. ಇದರಲ್ಲಿ ತಿಳಿಯುವವನು, ತಿಳಿಯಲ್ಪಡುವ ವಸ್ತು ಮತ್ತು ತಿಳಿವು ಅಂದರೆ ಜ್ಞಾನ ಎಂದು ಮೂರು ಭೇದ - ತ್ರಿಪುಟೀದ್ವೈತವು ಇರುತ್ತದೆ. (ಜ್ಞಾತಾ, ಜ್ಞೇಯ, ಜ್ಞಾನ = ತ್ರಿಪುಟೀ) ಸಂಸಾರೀ ಮನುಷ್ಯನು ಇಂತಹ ಜ್ಞಾನ ಮಾಡಿಕೊಂಡು ತನಗೆ ಇಷ್ಟವಾದ ವಿಷಯದಲ್ಲಿ ಪ್ರವರ್ತಿಸುತ್ತಲೂ, ಅನಿಷ್ಟವಾದ ವಿಷಯದಿಂದ ನಿವರ್ತಿಸುತ್ತಲೂ ಇರುವನು. ಹೀಗೆ ಇಷ್ಟರಿಂದ ಮನುಷ್ಯನಿಗೆ ಧರ್ಮ, ಅರ್ಥ, ಕಾಮ ಎಂಬ ಈ ತ್ರಿವರ್ಗಸಾಧನೆ ಆಗುವುದು (ತ್ರಿವರ್ಗ = ಇವು ಪುರುಷಾರ್ಥಗಳು). ಲೋಕದಲ್ಲಿ ಸಾಮಾನ್ಯವಾಗಿ ಜನರು ಇಷ್ಟು ಮಾತ್ರವೇ ಗುರಿಯಾಗಿ ಉಳ್ಳವರಾಗಿರುತ್ತಾರೆ. ಇಷ್ಟು ಸಾಧನೆಯಿಂದ ತಾವು ಧನ್ಯರೆಂದು ನಂಬಿಕೊಂಡಿರುತ್ತಾರೆ. ಆದರೆ ಅವರು ಮುಪ್ಪು, ಮರಣ, ರೋಗ, ಭಯ, ಚಿಂತೆ, ದುಃಖ ಮುಂತಾದ ಕ್ಲೇಶಗಳನ್ನು ಪದೇ ಪದೇ ಅನುಭವಿಸುತ್ತಾರೆ. ಆದ್ದರಿಂದ ಲೋಕದ ಜನರ ಧನ್ಯತೆಯ ನಂಬಿಕೆಯು ಸರಿಯಾದುದಲ್ಲ. ಅದು ತಪ್ಪು ತಿಳಿವಳಿಕೆ ಎಂದು ಬಲ್ಲವರು ಹೇಳುತ್ತಾರೆ. ಏಕೆಂದರೆ - ಜಗದ್ವಸ್ತುಗಳು ಒಂದಲ್ಲಾ ಒಂದು ದಿನ ನಾಶಹೊಂದತಕ್ಕವೇ ಆಗಿರುತ್ತವೆಂದು ಸಾಮಾನ್ಯವಾಗಿ ಗೊತ್ತಿರುತ್ತದೆ. ಶಾಸ್ತ್ರಗಳೂ ನ್ಯಾಯವೂ ಹಾಗೆಯೇ ತಿಳಿಸಿಕೊಡುತ್ತಿವೆ. ದೃಶ್ಯಂ ಸರ್ವಮಿದಂ ಮಿಥ್ಯಾ, ಉತ್ತರಕ್ಷಣಬಾಧಿತಃ

ಎಂದು ಎಚ್ಚರಿಸುತ್ತವೆ. (ಉತ್ತರಕ್ಷಣ ಎಂದರೆ ಅವಸ್ಥಾಂತರ ಎಂದರ್ಥ) ಜಾಗ್ರತ್ತಿನಲ್ಲಿರುವ ವಸ್ತುಗಳು ಸ್ವಪ್ನ ಸುಷುಪ್ತಿಗಳಲ್ಲಿ ಇರುವುದೇ ಇಲ್ಲ. ಸ್ವಪ್ನದಲ್ಲಿ ಕಂಡದ್ದು ಎಚ್ಚರದಲ್ಲಿ ಇರುವುದೇ ಇಲ್ಲ. ಆದ್ದರಿಂದ ವ್ಯಾವಹಾರಿಕ ಸತ್ಯ ಎಂಬುದು ಪರಮಾರ್ಥ ನಿತ್ಯ ಸತ್ಯ ಅಲ್ಲ. ಕ್ಷಣಿಕ ಅಂದರೆ ಕನಸಿನಂತೆ ಮಿಥ್ಯೆ ಎಂದು ತಿಳಿಯಬೇಕು. ಕಂಡದುದೆಲ್ಲವೂ ಸತ್ಯವೇ ಆಗಿರುತ್ತದೆಂಬ ನಿಯಮವೇನೂ ಇಲ್ಲ. ಮರುಜಲ, ನೆರಳು, ಕತ್ತಲೆ ಇಂದ್ರಜಾಲ ದೃಶ್ಯ, ಪ್ರತಿಬಿಂಬ, ಕನಸು, ರಜ್ಜುಸರ್ಪ, ಶುಕ್ತಿರಜತ ಎಂಬಿವೆಲ್ಲಾ ಕಾಣುತ್ತವೆ. ಹೀಗೆ ತೋರಿದ ವಸ್ತುಗಳು ವಿಚಾರ ಮಾಡಿಕೊಂಡ ಬಳಿಕ ಅವೆಲ್ಲಾ ಹುಸಿ ಎಂದು ಅನುಭವದಲ್ಲಿದೆ. ಅಲ್ಲದೇ ಜಗದ್ವಸ್ತುಗಳು ಇದ್ದಂತಿರುವುದಿಲ್ಲ. ಪರಿಣಾಮಿಗಳಾಗಿರುತ್ತವೆ. ಅಶಾಶ್ವತ ಎಂದು ಜಾಣರಿಗೆ ತಿಳಿದಿರುತ್ತದೆ. ಆದ್ದರಿಂದ ನೋಡುವಾಗ ಜಗತ್ತು ಸತ್ಯ ಎಂದು ತೋರಿದರೂ (ಜಾಗ್ರತ್ ವ್ಯವಹಾರವು ಮೋಹನಿದ್ರಾವಸ್ಥೆಯ ಸ್ಥಿರಸ್ವಪ್ನವೇ ಆಗಿರುವುದರಿಂದ) ಕನಸಿನಂತೆ ಹುಸಿ ಎಂದು ತಿಳಿಯಬೇಕು. ಕನಸಿನಲ್ಲಿ ತೋರುವ ವಸ್ತುಗಳಿಗೆ ನೋಡುವವನೇ ಸ್ಥಿತಿ-ಸತ್ತೆಯನ್ನು ಕೊಟ್ಟುಕೊಂಡಿರುತ್ತಾನೆ. ಆ ವಸ್ತುಗಳು ಸ್ವಯಂ ಸತ್ತೆಯುಳ್ಳವುಗಳಾಗಿರುವುದಿಲ್ಲ, ಸಾಪೇಕ್ಷಸತ್ತೆಯುಳ್ಳವು ಎಂದೇ ನಿಶ್ಚಯ. ಹಾಗೆಯೇ ಜಾಗ್ರತ್ಕಾಲದ ಜಗದ್ವಸ್ತುಗಳೂ ಸಾಪೇಕ್ಷ ಸತ್ತೆಯುಳ್ಳವೇ, ನಿರಪೇಕ್ಷ ಸತ್ಯವಲ್ಲ, ಆಗಮಾಪಾಯಿಗಳಾಗಿರುತ್ತವೆ. ಸ್ವಕರ್ಮಫಲವಾಗಿ ಬಂದವುಗಳಾಗಿವೆ ಮತ್ತು ಆತ್ಮನ ಸತ್ತ್ವದಿಂದ ಸತ್ತೆಯುಳ್ಳವಾಗಿರುತ್ತವೆ ಆದರೂ ಕ್ಷಣಿಕವಾಗಿರುತ್ತವೆ. ಹೀಗೆ ವ್ಯವಹಾರದ ವಸ್ತುಗಳು ಸತ್ಯ ಎನ್ನುವುದಾದರೂ ಇವಕ್ಕೆ ಸತ್ತ್ವವನ್ನು ಕೊಡುವ ಬೇರೊಂದು ವಸ್ತುವು ಸತ್ಯಸ್ಯ ಸತ್ಯಂ ಎಂಬ ಪರಮಾರ್ಥವಾದ ಸ್ವತಂತ್ರ ಸತ್ಯವು ಇರುವುದೆಂದು ಗೊತ್ತಾಗುವುದು. ಆಕಾಶವು ನೀಲಿ ಎಂದು ಬಾಲಕರು ತಿಳಿದುಕೊಂಡಿರುತ್ತಾರೆ. ಆದರೆ ಆಕಾಶಕ್ಕೆ ರೂಪವೇ ಇರುವುದಿಲ್ಲ. ಹಾಗೆಯೇ ನಾಮರೂಪ ಪ್ರಪಂಚವು ಸತ್ಯವೆಂದು ತಿಳಿದುಕೊಂಡಿರುವುದು ಭ್ರಾಂತಿಯೇ ಸರಿ. ಈ ಭ್ರಾಂತಿಗೆ ಕಾರಣವೇನೆಂದರೆ - ಮನುಷ್ಯನು ತನ್ನ ನಿಜಾತ್ಮನ ಸ್ವರೂಪವನ್ನು ಬೇರೆ ಎಂದು ಅರಿಯದೇ ದೇಹಾದಿಸಂಘಾತವನ್ನೂ ತನ್ನನ್ನೂ ಆತ್ಮನನ್ನು ಒಟ್ಟುಸೇರಿಸಿಕೊಂಡು ಅನ್ಯೋನ್ಯಾಧ್ಯಾಸದಿಂದ ನಾನು ಮನುಷ್ಯ ಜ್ಞಾತೃ ಎಂದು ಅಭಿಮಾನಪಟ್ಟುಕೊಂಡು ಮನಃ ಕಲ್ಪಿತ ಚಿದಾಭಾಸರೂಪದ ಪ್ರಮಾತೃವಾಗಿರುತ್ತಾನೆ. ಹಾಗೂ ಇಂದ್ರಿಯ ಪ್ರಮಾಣದಿಂದಲೇ ವಸ್ತು ಜ್ಞಾನಮಾಡಿ ಕೊಳ್ಳುತ್ತಿರುತ್ತಾನೆ. ಜಗತ್ತು ಬ್ರಹ್ಮಾತ್ಮಕವಾಗಿರುವುದರಿಂದ ಬ್ರಹ್ಮವು ಪ್ರಕಾಶರೂಪವಾಗಿರುವುದರಿಂದ ಪ್ರಮಾತೃವಿಗೆ ನಾಮರೂಪಗಳು ಸತ್ಯವೆಂದೇ

ಗ ಆತ್ಮ ಅನಾತ್ಮರ ಅಧ್ಯಾಸವಾಗಿರುವ ಅವಸ್ಥೆಗೇ ಜಾಗರವೆಂದು ಹೆಸರು.



ತೋರುವುದು. ಆತ್ಮನಿಗೆ ಆರೋಪಾಧ್ಯಾಸವಿಲ್ಲದಿದ್ದರೆ ಸುಷುಪ್ತಿಯಂತೆ ಅವನು ಪ್ರಮಾತೃವೇ ಆಗಿರುವುದಿಲ್ಲ. ಆಗ ಪ್ರಮಾಣಗಳೂ ಇರುವುದಿಲ್ಲ. ಅವುಗಳ ಉಪಯೋಗವೂ ಇಲ್ಲ (ಅಂದಾಗ ಆಗ ಜ್ಞಾನವಾಗುವ ಸಂಭವವೇ ಇಲ್ಲ) ಅಂದಾಗ ಜಾಗರದಲ್ಲಿ ಇಂದ್ರಿಯ ಪ್ರಮಾಣಗಳಿಂದ ಪ್ರಮಾತೃಗಳಾದ ಮನುಷ್ಯರು ತಿಳಿಯುತ್ತಿರುವ ನಾಮರೂಪ ಜಗದ್ ವಸ್ತುಗಳೂ ಮತ್ತು ಅವರ ಜ್ಞಾನಗಳೂ ಸತ್ಯಪರಮಾರ್ಥವಲ್ಲ. ಹುಸಿ, ಮಿಥ್ಯೆ ಎಂದು ನಿಶ್ಚಯವಾಗುವುದು. ಇಂತಿರುವುದು ವ್ಯಾವಹಾರಿಕ ಸತ್ಯದ ಪಾಡು.

೨. ಪ್ರಾತಿಭಾಸಿಕಸತ್ಯ. ಇದರ ಪರಿ ಏನೆಂದರೆ - ತಿಳಿದುಕೊಳ್ಳಬೇಕೆಂಬ ಉದ್ದೇಶ, ತಕ್ಕ ಪ್ರಯತ್ನ ಇಲ್ಲದೇ ಹೇಗೋ ಆಕಸ್ಮಿಕವಾಗಿ, ಮನುಷ್ಯನಿಗೆ ಸ್ವಾಭಾವಿಕವಾಗಿ ವಸ್ತುವು ತೋರುವುದುಂಟು. ಹೀಗೆ ಕ್ಲಪ್ತಜ್ಞಾನಸಾಮಗ್ರಿ ಇಲ್ಲದೇ ಉಂಟಾಗುವ ಜ್ಞಾನಕ್ಕೂ ಮತ್ತು ಅದರ ವಿಷಯ ವಸ್ತುವಿಗೂ ಪ್ರಾತಿಭಾಸಿಕಸತ್ಯ ಎನ್ನುವರು. ಉಚಿತ ಪ್ರಮಾಣದಿಂದ ತಿಳಿಯುವ ವಸ್ತುವನ್ನು ಮಾತ್ರ ನಿಜ ಎಂದು ಪರಿಗಣಿಸಬೇಕು. ಹಾಗಿಲ್ಲದಿದ್ದರೆ ಅದು ನಿಜ ಹೇಗಾದೀತು ! ಕನಸು, ಇಂದ್ರಜಾಲ, ಮಾಯೆ, ಭ್ರಮೆ ಮುಂತಾದಕಡೆ ಮನುಷ್ಯನ ತಕ್ಕ ಪ್ರಯತ್ನ, ಉದ್ದೇಶ ಇಲ್ಲದೆಯೂ ದೃಶ್ಯವಸ್ತುಗಳು ತೋರುವುವು. ಆ ಕಾಲದಲ್ಲಿ ಅವೆಲ್ಲಾ ಸತ್ಯ ಎಂದೇ ತೋರುತ್ತವೆ. ಅಸತ್ಯ ಎಂದು ಗೊತ್ತಾಗುವುದಿಲ್ಲ. ಕನಸಿನ ಪದಾರ್ಥಗಳಿಗೆ ನೋಡುವಾತನೇ ಆಗ ಸತ್ತ್ವವನ್ನು ಕೊಟ್ಟಿರುತ್ತಾನೆ. ಕತ್ತಲೆ ಎಂಬ ವಸ್ತುವಿಗೆ ನೋಡುವವನೇ ಸ್ಥಿತಿಯನ್ನು ಕೊಟ್ಟಿರುತ್ತಾನೆ. ಅಲ್ಲಿ ಕತ್ತಲೆ ಎಂಬ ವಸ್ತು ಇರುವುದೇ ಇಲ್ಲ. ಹಾಗೆಯೇ ಕನಸಿನಲ್ಲಿ ಮನೋಮಯಾತ್ಮನಲ್ಲದೇ (ನೋಡುವವನಲ್ಲದೆ) ಬೇರೆ ವಸ್ತು ಒಂದೂ ಇರುವುದಿಲ್ಲ. ಇಂದ್ರಜಾಲ ಮಾಯೆಯಲ್ಲಿಯೂ ಹೀಗೆಯೇ ಆದ್ದರಿಂದ ಸ್ವಪ್ನ ಪದಾರ್ಥಗಳನ್ನು ಪ್ರಾತಿಭಾಸಿಕಸತ್ಯ ಎನ್ನುವರು. ವಸ್ತು ತೋರುತ್ತದೆ ಅಷ್ಟೆ. ನಿಜವಾಗಿ ವಸ್ತು ಇರುವುದಿಲ್ಲ. ಸ್ವಪ್ನಾವಸ್ಥೆಯಲ್ಲಿ ಕನಸು ಕಾಣುವುದು ಏಕೆಂದರೆ - ಆಗ ಚೇತನಾತ್ಮನು ಸೂಕ್ಷ್ಮವಾದ ಮನಸ್ಸಿನೊಡನೆ ಆರೋಪಾಧ್ಯಾಸದಿಂದ ಮನೋಮಯ - ಪ್ರಮಾತಾ ಆಗಿರುತ್ತಾನೆ. ಆ ಮನಸ್ಸು ಜಾಗ್ರದನುಭವದ ಅನೇಕ ವಾಸನೆಗಳುಳ್ಳದ್ದಾಗಿದ್ದು ಆಯಾಯಾ ವಸ್ತುರೂಪವಾಗಿ ಪರಿಣಮಿಸುತ್ತಾ ಇರುತ್ತದೆ. ಅಂತಹ ವಾಸನಾರೂಪದ ಸೂಕ್ಷ್ಮ ವಸ್ತುಗಳು ಆತ್ಮಜ್ಯೋತಿಯಿಂದ ಹೊಳೆಯುತ್ತವೆ. (ಅವು ಸ್ಮೃತಿರೂಪ ಎನ್ನಬಹುದು). ಅದೇ ಸ್ವಪ್ನಾನುಭವ - ಸ್ವಪ್ನದರ್ಶನವಾಗಿರುತ್ತದೆ. ಆಗ ಮನೋಮಯ ಪ್ರಮಾತೃವು (ತೈಜಸ) ಕಲ್ಪಿತ ಪ್ರಾತಿಭಾಸಿಕಾತ್ಮಾ ಆಗಿರುತ್ತಾನೆ. ಮಿಥ್ಯಾತ್ಮನಾಗಿರುತ್ತಾನೆ. ಹೀಗೆ ಕಲ್ಪಿತಾತ್ಮನು ಸ್ವಪ್ನವನ್ನು

ನೋಡುತ್ತಿರುವಾಗಲೇ ಆ ವಸ್ತುಗಳು ವಿಕಾರಹೊಂದುತ್ತಿರುವುವು. ಅನುಭವಿಸಿದ, ಅನುಭವಿಸದೇ ಇರುವ ಸಂಭಾವ್ಯವಾದ, ಅಸಂಭಾವ್ಯವಾದ ಏನೇನೋ ಪ್ರಸಂಗಗಳು ಆಗ ತೋರುತ್ತವೆ. ಹೀಗೆ ಅವ್ಯವಸ್ಥಿತವಾಗಿರುವುದರಿಂದಲೂ ಕನಸನ್ನು ಅಸತ್ಯವೆಂದು ಎಲ್ಲರೂ ತಿಳಿದಿರುತ್ತಾರೆ. ಆದರೆ ಕನಸಿನಲ್ಲಿ ವಸ್ತುಗಳು ಹೊಳೆದುದು ಅನುಭವಿಸಿದ್ದೆಂಬ ಅರಿವು ಸಾಕ್ಷಾದಾತ್ಮನೇ ಆಗಿರುವುದರಿಂದ ಅದು ಮಾತ್ರ ಸತ್ಯವೇ ಆಗಿರುತ್ತದೆ. ಆದ್ದರಿಂದಲೇ ಕನಸಿನ ಸ್ಮರಣೆಯು ಸಂಭವಿಸುವುದು. ಸ್ವಪ್ನದೃಶ್ಯಗಳು ಮಾತ್ರ ಮಿಥ್ಯೆ – ಪ್ರಾತಿಭಾಸಿಕಗಳಾಗಿರುತ್ತವೆ. ಅವು ಮತ್ತೆ ಸಿಕ್ಕುವುದಿಲ್ಲ. ಇದರಂತೆ ಮರುಜಲ, ರಜ್ಜುಸರ್ಪ, ಶುಕ್ತಿರಜತ ಮತ್ತು ನಾನು ನನ್ನದು ಎಂಬ ಸ್ಥಳಗಳಲ್ಲೂ ವಿಷಯಗಳು ತೋರುತ್ತವೆ. ಆದರೆ ಅವು ನಿಜವಲ್ಲ, ಯಥಾರ್ಥಗಳಾಗಿರುವುದಿಲ್ಲ ಎಂದು ತಿಳಿಯಬೇಕು. ದೃಶ್ಯಂ ಮಿಥ್ಯಾ. ಉತ್ತರ ಕ್ಷಣಬಾಧತಃ ಎಂದುದನ್ನು ನೆನೆಯಬೇಕು. ಕನಸಿನ ಅನುಭವ ಆಗುವಾಗಲೂ ದ್ರಷ್ಟಾ, ದೃಶ್ಯ, ದರ್ಶನ ಎಂಬ ತ್ರಿಪುಟೀದ್ವೈತವು ಇದ್ದೇ ಇರುವುದು. ಆರೋಪ ಅಧ್ಯಾಸವೂ ಇರುವುದೆಂದು ಮೇಲೆ ಹೇಳಿಯೇ ಇರುತ್ತೆ. ಹೀಗೆ ಕನಸಿನಲ್ಲಿ ಮತ್ತು ಭ್ರಾಂತಿ ಸ್ಥಳದಲ್ಲಿ ಕ್ಷಣಿಕವೂ ಸೂಕ್ಷ್ಮವೂ ಆದ ವಸ್ತುಗಳ ಅನುಭವವಾಗುವುದು. ಜಾಗ್ರತ್ತಿನಲ್ಲಿ ಸ್ಥೂಲವಾದ ಮತ್ತು ಸ್ಥಿರವಾದ ವಸ್ತುಗಳ ಜ್ಞಾನಾನುಭವವಾಗುವುದು. ಇಷ್ಟೇ ವ್ಯತ್ಯಾಸ. ಸ್ವಪ್ನಜಾಗರಗಳೆರಡನ್ನೂ ಒಂದೇ ಬಗೆ ಎಂದು ಪರಿಗಣಿಸಬಹುದಾಗಿದೆ. ಈ ರೀತಿ ವಿಚಾರ ಮಾಡಿಕೊಂಡಾಗ ವ್ಯಾವಹಾರಿಕ ಸತ್ಯದಂತೆ ಪ್ರಾತಿಭಾಸಿಕಸತ್ಯವೂ ಹುಸಿ, ಮಿಥ್ಯೆ ಎಂದಾಯಿತು. ಅಂದರೆ ಪ್ರಾತಿಭಾಸಿಕವು = ಸ್ವಪ್ನವು ಹೇಗೆ ಮಿಥ್ಯೆಯೋ ಹಾಗೆಯೇ ಜಾಗ್ರತ್‌ಕಾಲದ ಜ್ಞಾನ = ಅನುಭವ ಮತ್ತು ವಸ್ತು ವ್ಯವಹಾರಗಳೂ ಮಿಥ್ಯೆ (ಸ್ಥಿರಸ್ವಪ್ನವೆಂದೇ) ಎಂದೇ ನಿಶ್ಚಯವಾಗುವುದು.

೩. ಇನ್ನು ಪಾರಮಾರ್ಥಿಕ ಸತ್ಯವನ್ನು ವಿಚಾರದಿಂದ ತಿಳಿಯೋಣ. ಅದಕ್ಕೆ ಮೊದಲು ಸತ್ಯ ಎಂದರೇನು ? ಅದರ ಸ್ವರೂಪ ಲಕ್ಷಣವೇನು ? ಎಂಬುದನ್ನೇ ನಿಶ್ಚಯಮಾಡಿಕೊಳ್ಳಬೇಕು. ಶ್ರುತಿ, ಯುಕ್ತಿ, ಅನುಭವ ಪ್ರಮಾಣಗಳಿಂದ ಯಾವ ವಸ್ತುವು ಇದೆ ಎಂದು ತಿಳಿದುಬರುವುದೋ ಮತ್ತು ಆ ವಸ್ತುವು ಎಂದಿಗೂ ಬದಲಾವಣೆಯಾಗುವುದಿಲ್ಲವೋ, ಇಲ್ಲದ್ದಾಗುವುದಿಲ್ಲವೋ ಅಂತಹ ವಸ್ತುವೇ ನಿಜ = ಪರಮಾರ್ಥ ಸತ್ಯ ಎಂದು ನಿಶ್ಚಯಿಸಲು ಅರ್ಹವಾಗಿರುವುದು. ಅಂತಲ್ಲದುದು ಅಸತ್ಯ ಮಿಥ್ಯೆ ಎಂದೇ ತೀರ್ಮಾನಿಸಬೇಕು. ಬ್ರಹ್ಮಾತ್ಮವಸ್ತು ಒಂದೇ ಅಂತಹ ಪರಮಾರ್ಥಸತ್ಯ ಎಂಬುದು ವಿಚಾರದಿಂದ = ಪ್ರಮಾಣದಿಂದ ಗೊತ್ತಾಗುವುದು. ಸರ್ವಾತ್ಮನಾದ ಬ್ರಹ್ಮವು ಇರುವುದೆಂದು

ಶ್ರುತಿ ಪ್ರಮಾಣವಿದೆ. ಯತ್ ಸಾಕ್ಷಾದಪರೋಕ್ಷಾದ್ ಬ್ರಹ್ಮ ಯ ಆತ್ಮಾಸರ್ವಾಂತರಃ। ಆತ್ಮಾ ಗುಹಾಯಾಂ ನಿಹಿತೋಽಸ್ಯ ಜಂತೋಃ। ಎಂದು ಶ್ರುತಿ ಇದೆ. ಬುದ್ಧಿಗುಹೆಯಲ್ಲಿ ಆತ್ಮನು ಪ್ರತಿಬಿಂಬ ರೂಪ ಮತ್ತು ಸಾಕ್ಷಾದ್ರೂಪದಿಂದಲೂ ಇರುವನು. ಆ ಬ್ರಹ್ಮಾತ್ಮವಸ್ತುವು ಪರಮಾರ್ಥ ನಿತ್ಯಸತ್ಯ ಎಂದೂ ಶುದ್ಧ ಬುದ್ಧ ಮುಕ್ತ ಸ್ವಭಾವದ ಅದ್ವಿತೀಯ ಸಚ್ಚಿದಾನಂದ ಎಂದೂ ಶ್ರುತಿಯೇ ತಿಳಿಸಿಕೊಡುತ್ತಿರುವುದು. ಯುಕ್ತಿ ಏನೆಂದರೆ - ೧. ಈ ಜಗದ್ವಸ್ತುಗ್ತಳೆಲ್ಲವೂ ಕಾರ್ಯವಾಗಿರುವುದರಿಂದ ಇವೆಲ್ಲಕ್ಕೂ ಕಾರಣವಾದ ಮೂಲವಸ್ತು ಇರಲೇಬೇಕು. ಆ ವಸ್ತುವಿಗೆ ಮತ್ತೆ ಕಾರಣ ಎಂಬುದಿರುವುದಿಲ್ಲ. ೨. ಈ ಜಗತ್ಪದಾರ್ಥಗಳು ನಿರಾಧಾರವಾಗಿರಲಾರವು. ಈ ಆಧೇಯ ವಸ್ತುಗಳೆಲ್ಲಕ್ಕೂ ಮೂಲಾಧಾರ ಒಂದು ಇರಲೇಬೇಕು. ಆ ಮೂಲಾಧಾರವಸ್ತುವು ಒಂದು ತಾನೇ ತಾನು ನಿರಾಧಾರವಾಗಿ, ಸ್ವತಂತ್ರವಾಗಿ, ಸ್ವಯಂಪ್ರಕಾಶವಾಗಿ ಇರಲೇಬೇಕು. ೩. ಇಲ್ಲಿ ದೃಶ್ಯ-ಜ್ಞೇಯ ಸರ್ವ ವಿಷಯಗಳನ್ನೂ ಅರಿಯುವ ಚೇತನನೊಬ್ಬ ಇರಲೇಬೇಕು. ಅವನು ಮಾತ್ರ ಅರಿಯಲ್ಪಡತಕ್ಕವನಾಗುವುದಿಲ್ಲ. ೪. ಈ ಸರ್ವ ವಿಕಾರ ವಸ್ತುಗಳಿಗೂ ಮೂಲದಲ್ಲೊಂದು ಪ್ರಕೃತಿ ಇರಲೇಬೇಕು. ಆ ಮೂಲ ಪ್ರಕೃತಿಯು ಮಾತ್ರ ನಿರ್ವಿಕಾರವಾಗಿಯೇ ಇರುವುದಾಗಿರಬೇಕು. ೫. ಜನರು ಧರ್ಮಾಧರ್ಮ ಕರ್ಮಗಳನ್ನು ಮಾಡುತ್ತಿರುತ್ತಾರೆ. ಅವರ ಕರ್ಮಕ್ಕೆ ತಕ್ಕ ಫಲ ಕೊಡುವ ಒಬ್ಬ ಪ್ರಭು ಇರಲೇಬೇಕು. ೬. ಈ ಸೃಷ್ಟಿಕಾರ್ಯವನ್ನು ಮಾಡುವ ಒಬ್ಬ ಕರ್ತೃವು ಇರಲೇಬೇಕು. ಇತ್ಯಾದಿ ತರ್ಕ, ಯುಕ್ತಿಗಳಿಂದ ಸರ್ವಜ್ಞ, ಸರ್ವಶಕ್ತ, ಚೇತನಾತ್ಮನೊಬ್ಬನಿರುವುದು ನಿಶ್ಚಯವಾಗುತ್ತದೆ. ಚೇತನ ಅನೇಕತ್ವಕ್ಕೆ ಪ್ರಮಾಣವಿಲ್ಲ. ಭೇದವು ಉಪಾಧಿನಿಮಿತ್ತವೇ ಆಗಿರುತ್ತದೆ. ಈ ಶ್ರುತಿ, ಯುಕ್ತಿಗಳಿಗೆ ಅನುಗುಣವಾಗಿ ಸಾರ್ವತ್ರಿಕವಾದ ಅನುಭವವೂ ಇರುವುದು. ಎಂತೆಂದರೆ - ನಾನು ಇದ್ದೇನೆ ಎಂಬ ಅನುಭವವು ಎಲ್ಲರಿಗೂ ಸಾಕ್ಷಾದಪರೋಕ್ಷವಾಗಿ ಇದ್ದೇ ಇರುವುದಷ್ಟೆ! ಅರಿವು ಇರುವ ಈ ನಾನು ಎಂಬ ವಸ್ತುವಿನ ಸ್ವರೂಪವು ಎಲ್ಲರಿಗೂ ತಿಳಿದಿರುವುದಿಲ್ಲವಾದರೂ ತಾನು ಇರುವ ಜ್ಞಾನವು ಸ್ವಾಭಾವಿಕವಾಗಿಯೇ ಇರುವುದು ನಿಶ್ಚಯ. ಈ ನಾನಿದ್ದೇನೆಂಬ ಜ್ಞಾನವು ಜಾಗ್ರತ್ ಸ್ವಪ್ನಸುಷುಪ್ತಿಗಳಲ್ಲೂ, ಬಾಲ್ಯ ಯೌವನ ವಾರ್ಧಕ ಅವಸ್ಥೆಗಳಲ್ಲೂ ಸ್ತ್ರೀ ಪುರುಷಾದಿ ಸಕಲ ಪ್ರಾಣಿಗಳಿಗೆ ಇದ್ದೇ ಇರುವುದು. ಈ ನಾನು ಎಂಬ ಭಾವವು ಜಾಗ್ರತ್ ಸ್ವಪ್ನಸ್ಥಿತಿಗಳಲ್ಲಿ ನಾನಾ ಪ್ರಕಾರವಾಗಿ ತೋರಬಹುದು. ಆದರೆ ಅದು ನಿಜಸ್ಥಿತಿ ಅಲ್ಲ. ಸುಷುಪ್ತಿಯ ಅನುಭವದ ಪ್ರಕಾರ ಯಾವಾಗಲೂ ಎಲ್ಲರಲ್ಲಿಯೂ ನಾನು ಎಂದು ಏಕಪ್ರಕಾರವಾಗಿಯೇ ಇರುವ

ನಾನು = ತಾನು ಎಂಬ ನಿರ್ವಿಶೇಷ ಪ್ರಾಜ್ಞ ಏಕಚೇತನನಲ್ಲಿ ಈ ಜಾಗ್ರತ್ ಸ್ವಪ್ನಗಳು ಬರುತ್ತವೆ - ಹೋಗುತ್ತವೆ. ಅವು ಆಗಮಾಪಾಯಿಗಳು. ದೇಹೇಂದ್ರಿಯಗಳಿಗೆ ಸಂಬಂಧಪಟ್ಟವುಗಳು. ಚೇತನಾತ್ಮನಿಗೆ ಸೇರಿದವುಗಳಲ್ಲ. ನಾನು ಎಂಬ ಆತ್ಮಚೇತನನು ಆಗಮಾಪಾಯಿಯಲ್ಲ. ಹೇಯೋಪಾದೇಯನೂ ಅಲ್ಲ. ಕಾಲಾತೀತನಾಗಿ ನಿತ್ಯವಾಗಿರುವ ಆತ್ಮನು ಜಾಗ್ರತ್‌ಸ್ವಪ್ನಗಳಲ್ಲಿ ಇರುವಂತೆ ನಿದ್ರೆಯಲ್ಲೂ ಇರುತ್ತಾನೆ. ಆಗ ನಾನು = ತಾನು ಎಂಬ ಆತ್ಮನು ದೇಹೇಂದ್ರಿಯಗಳೊಂದಿಗೆ ಸಂಬಂಧಿಸಿಕೊಂಡಿರುವುದಿಲ್ಲ, ಅಂದರೆ ದೇಹೇಂದ್ರಿಯಗಳು ಮಿಥ್ಯೆ ಆದ್ದರಿಂದ ಆಗ ಅವು ಇರುವುದೇ ಇಲ್ಲ ಎಂಬುದನ್ನು ಜ್ಞಾಪಿಸಿಕೊಂಡು, ಅನ್ಯೋನ್ಯಾಧ್ಯಾಸ - ನಾನು ಎಂಬ ಅಹಂಕಾರ = ಮಿಥ್ಯಾಜ್ಞಾನವೂ ಇರುವುದಿಲ್ಲೆಂಬುದನ್ನೂ ಸ್ಮರಿಸಬೇಕು. ಹೀಗೆ ಆತ್ಮನು ಎಲ್ಲಾ ಸಂಬಂಧಗಳನ್ನೂ ಬಿಟ್ಟು ಅಂದರೆ ವಿಶೇಷ ಸ್ಥಿತಿಯಿಲ್ಲದೇ ಕೇವಲ ತಾನೇ ತಾನಾಗಿ ಪ್ರಮಾತೃತ್ವವಿಲ್ಲದ ಅದ್ವಿತೀಯ, ನಿರ್ವಿಶೇಷ ಸ್ಥಿತಿಯಲ್ಲಿ ಉಳಿದುಕೊಂಡಿರುವುದೇ ಚೈತನ್ಯನ ನಿಜವಾದ ಆತ್ಮಚೇತನನ ಸ್ವಭಾವಸ್ವರೂಪವಾಗಿರುವುದು. ಇದೇ ನಿರ್ವಿಶೇಷ ಸ್ಥಿತಿ. ಇಂತಹ ನಿರ್ವಿಶೇಷ ಸ್ವರೂಪದಿಂದಲೇ ಆತ್ಮನು ಜಾಗ್ರತ್, ಸ್ವಪ್ನ, ಸುಷುಪ್ತಿ ಎಂಬ ಮೂರು ಅವಸ್ಥೆಗಳಲ್ಲೂ ಬಾಲ್ಯ ಯೌವನವಾರ್ಧಕಾದಿ ಅವಸ್ಥೆಗಳಲ್ಲೂ ಪ್ರಾಣಿಗಳ ಶರೀರದಲ್ಲಿ ಪೂರ್ಣನಾಗಿರುತ್ತಾನೆ. ಅವನು ಕೂಟಸ್ಥ ಸಾಕ್ಷಿಯಾಗಿದ್ದು ಯಾವಾಗಲೂ ಏಕಾಖಂಡ ನಿರ್ವಿಕಾರಿಯಾಗಿರುತ್ತಾನೆ. ಸಮಭಾವದಲ್ಲೇ ಇರುತ್ತಾನೆ ಎಂದು ವಿವೇಚನಾಪೂರ್ವಕವಾಗಿ ಅರಿತು ನಿಶ್ಚಯಮಾಡಿಕೊಳ್ಳಬೇಕು. ಈ ವಿಷಯವು ಅಜ್ಞಾನಿಗಳಿಗೆ ತಿಳಿದಿರುವುದಿಲ್ಲ, ಆದರೂ ಸಾರ್ವತ್ರಿಕವಾಗಿ ನಾನು ಇದ್ದೇನೆಂಬ ಅನುಭವವು ಎಲ್ಲರಿಗೂ ಸ್ವಾಭಾವಿಕವಾಗಿ - ಅಪರೋಕ್ಷವಾಗಿರುವುದರಿಂದ ಸ್ವಾನುಭವವೆಂಬ ಸ್ವಯಂಪ್ರಕಾಶ ಪ್ರಮಾಣದಿಂದ ಸಿದ್ಧನಾಗಿರುವ ನಾನು = ತಾನು ಎಂಬ ಒಬ್ಬನೇ ಒಬ್ಬ ಪ್ರಾಜ್ಞ ಆತ್ಮನೇ ಪಾರಮಾರ್ಥಿಕ ಸತ್ಯವಸ್ತುವಾಗಿರುವನು. ಮನುಷ್ಯಾದಿ ಸಕಲ ಪ್ರಾಣಿಗಳ ನಿಜ ಆತ್ಮನು ಇವನೇ. ಇವನೇ ಅದ್ವೈತ ಬ್ರಹ್ಮವು = ಪರಮಾತ್ಮನಾಗಿರುತ್ತಾನೆ. ಈ ಬ್ರಹ್ಮವೇ ಪಾರಮಾರ್ಥಿಕ ಸತ್ಯವು. ಈ ನಿರಪೇಕ್ಷವಸ್ತುವೇ ಜಗತ್ತಿಗೆ ಮೂಲಕಾರಣವು. ಈ ನಿರಾಧಾರವಸ್ತುವೇ ಪ್ರಪಂಚಕ್ಕೆ ಮೂಲಾಧಾರವು. ಸ್ವಯಂಪ್ರಕಾಶ ಸ್ವತಂತ್ರವಸ್ತುವು ಇದೇ. ಸರ್ವವನ್ನೂ ಅರಿಯುವ ಈ ಸರ್ವಜ್ಞ ಏಕಚೇತನ ವಸ್ತುವೇ ಪಾರಮಾರ್ಥಿಕ ಸತ್ಯವೆಂದು ನಿಶ್ಚಯಮಾಡಿಕೊಳ್ಳಬೇಕು. ಇಂತು ಸತ್ಯವಸ್ತುವನ್ನು ವಿವೇಚಿಸಿಕೊಂಡು ತಿಳಿದಿದ್ದಾಯಿತು. ಇನ್ನು ಈಗ ಮೂರು ಬಗೆಯ

ಜ್ಞಾನಾನುಭವಗಳ ಸ್ವರೂಪಸಂಗತಿಗಳನ್ನು ವಿಚಾರಮಾಡೋಣ –

ಪ್ರಪಂಚದಲ್ಲಿ ನಾನಾ ಜನರ ಅಸಂಖ್ಯ ಅನುಭವಗಳು ಇರಬಹುದು. ಅವುಗಳ ಪರಿಚಯವು ಅಸಾಧ್ಯವೇ ಸರಿ. ಅಲ್ಲದೆ ಅವನ್ನೆಲ್ಲಾ ವಿಚಾರಮಾಡುವುದರಿಂದ ಪ್ರಕೃತ ಪರಮಾರ್ಥನಿಶ್ಚಯಕ್ಕೆ ಲಾಭವೇನೂ ಆಗುವುದಿಲ್ಲ. ಆದ್ದರಿಂದ ಅವಸ್ಥಾತ್ರಯ ದಲ್ಲಾಗುವ ಸಾರ್ವತ್ರಿಕ ಅನುಭವವನ್ನು ಪರೀಕ್ಷಿಸಿ ವಿಚಾರಮಾಡಿಕೊಂಡರೇ ಪ್ರಸಂಗಕ್ಕೆ ಸಾಕಾಗುವುದು. ಈ ಕ್ರಮದಲ್ಲಿ ವಿವೇಚಿಸಿಕೊಂಡರೇ ತತ್ತ್ವನಿಶ್ಚಯ ಆಗುವುದು.

೧. ಸಾಮಾನ್ಯಾನುಭವ ಎಂದರೆ – ಜಾಗರದಲ್ಲಿ ಉಂಟಾಗುವ ಜ್ಞಾನಕ್ಕೆ ಹೆಸರು. ಸನ್ನಿವೇಶ, ಕ್ರಿಯಾ, ಕಾರಕ, ಪ್ರಮಾಣ, ಸಂನ್ನಿಕರ್ಷ (ಸಂಬಂಧ)ಗಳು ಸಮವಾಗಿರುವಾಗ ಎಲ್ಲ ಜನರಿಗೂ ಒಂದೇ ಬಗೆಯ ಜ್ಞಾನ ಉಂಟಾಗುವುದು. ಇದೇ ಸಾಮಾನ್ಯಾನುಭವವು. ಚೈತ್ರ ಎಂಬ ಪ್ರಮಾತೃವು ಹಸುವನ್ನು ಕಣ್ಣಿನಿಂದ ನೋಡಿ, ಇದು ಹಸು ಎಂದು ತಿಳಿದುಕೊಳ್ಳುವಂತೆ ಇನ್ನೊಬ್ಬನೂ, ಮತ್ತೊಬ್ಬನೂ ಹಸು ಎಂದೇ ತಿಳಿದುಕೊಳ್ಳುತ್ತಾನೆ. ಬೇರೆ ತರಹ ತಿಳಿಯುವುದಿಲ್ಲ. ಜ್ಞಾನ ಅನುಭವ ಎರಡೂ ಒಂದೇ. ಈ ಸ್ಥಳದಲ್ಲಿ ನೋಡುವವನು ಪ್ರಮಾತೃವಾಗಿರುತ್ತಾನೆ. ಕಣ್ಣು = ಇಂದ್ರಿಯ ಪ್ರಮಾಣವಾಗಿರುತ್ತದೆ. ಬಾಹ್ಯದಲ್ಲಿ ದೃಶ್ಯವಸ್ತುವು ಪ್ರಮೇಯ = ವಿಷಯವಾಗಿರುತ್ತದೆ. ಪ್ರಮಾತೃವಿನ ಮನಸ್ಸಿನಲ್ಲಿ ಜ್ಞಾನ = ಪ್ರಮಾ ಉಂಟಾಗುವುದು. ಇದೇ ತ್ರಿಪುಟೀದ್ವೈತವಾಗಿರುತ್ತದೆ. ಹೀಗೆ ಮೂರೂ ಬೇರೆಬೇರೆಯಾಗಿರುತ್ತದೆ. ಜ್ಞಾನವೂ ಕೂಡ ಬುದ್ಧಿವೃತ್ತಿ ಅಂದರೆ ಪ್ರತ್ಯಯರೂಪವಾಗಿರುವುದು. ಅದು ನಿಜಜ್ಞಾನದ ಪ್ರತಿಬಿಂಬರೂಪವಾಗಿರುವುದು. ಇಂತಹ ಜ್ಞಾನವು ಬುದ್ಧಿವೃತ್ತಿಯು ಕ್ಷಣಿಕವಾದ್ದರಿಂದ ಒಂದು ಕ್ಷಣದಲ್ಲಿ ಹುಟ್ಟಿ ಮರುಕ್ಷಣದಲ್ಲಿ ನಾಶಹೊಂದುತ್ತದೆ. ಆದ್ದರಿಂದ ಇದು ಸತ್ಯವಾದ ಜ್ಞಾನವಲ್ಲ. ಇದನ್ನು ಜ್ಞಾನಾಭಾಸ ಜ್ಞಾನದಂತೆ ತೋರುವುದು ಎನ್ನಬಹುದಾಗಿದೆ. ಇದು ನಿಜವಾದ ಶುದ್ಧ ಜ್ಞಾನವಲ್ಲ, ನಿಜಸತ್ಯವಲ್ಲ ಎಂದು ತಿಳಿಯಬೇಕು.

೨. ವಿಭಕ್ತಾನುಭವ ಎಂದರೆ ಸ್ವಪ್ನದಲ್ಲಾಗುವ ಜ್ಞಾನಕ್ಕೆ ಹೆಸರು. ವಿಭಕ್ತ ಎಂದರೆ ಬೇರೆಯಾರಿಗೂ ತಿಳಿಯದಂತೆ ತಾನೊಬ್ಬನೇ ಏಕಾಂತವಾಗಿ ವಿಷಯವನ್ನು ಅನುಭವಿಸುವುದು, ಜ್ಞಾನಮಾಡಿಕೊಳ್ಳುವುದು. ಒಬ್ಬನ ಸ್ವಪ್ನದಲ್ಲಿ ಇರುವ ಸಾಮಗ್ರಿಗಳು ಮತ್ತು ಉಂಟಾಗುವ ಜ್ಞಾನವು ಅವನೊಬ್ಬನಿಗೇ ಕ್ಲಪ್ತವಾಗಿರುವುದು. ಬೇರೆ ಯಾರಿಗೂ ತಿಳಿಯುವುದಿಲ್ಲ, ಇದು ಎಲ್ಲರಿಗೂ ಗೊತ್ತೇ ಇದೆ. ಹೀಗೆ ಸ್ವಪ್ನಪ್ರಪಂಚವು ಒಬ್ಬೊಬ್ಬರಿಗೂ

ದಿನದಿನಕ್ಕೂ ಬೇರೆ ಬೇರೆಯಾಗಿಯೇ ಇರುವುದರಿಂದ ಈ ಸ್ವಪ್ನ ಮತ್ತು ಜ್ಞಾನಗಳು ಬೇರೆ ಬೇರೆ ಲೋಕಗಳೋ ಬೇರೆ ಬ್ರಹ್ಮಾಂಡವೋ ಎಂಬಂತೆ ಇರುವುವು. ಆದ್ದರಿಂದ ಸ್ವಪ್ನಾನುಭವವು ಸಾಮಾನ್ಯಾನುಭವವಾಗಿರುವುದಿಲ್ಲ. ಆದರೂ ಸ್ವಪ್ನಾನುಭವವಾಗುವಾಗ ಎಚ್ಚರದಲ್ಲಾಗುವಂತೆ ಸುಖ ದುಃಖ ವೇದನೆಗಳು ಉಂಟಾಗುವುದರಿಂದ ಇದನ್ನು ಜ್ಞಾನ, ಅನುಭವ ಎಂದು ಒಪ್ಪಲೇಬೇಕು. ಹೀಗೆಯೇ ಭ್ರಾಂತಿಯೂ ವಿಭಕ್ತಾನುಭವವಾಗಿರುವುದು. ಈ ಏಕಾಂತಾನುಭವದಲ್ಲಿಯೂ ಜ್ಞಾತೃ, ಜ್ಞೇಯ, ಜ್ಞಾನ ಎಂಬ ತ್ರಿಪುಟೀದ್ವೈತ ಇರುವುದರಿಂದ ಜಾಗ್ರತ್-ಸ್ವಪ್ನ ಇವೆರಡನ್ನೂ ಸಮಾನ ಒಂದೇ ಎಂದು ಭಾವಿಸಬಹುದಾಗಿದೆ ಎಂದು ಬಲ್ಲವರು ಹೇಳುವರು. ಸ್ವಪ್ನವು ಮಿಥ್ಯೆ ಎಂದು ಎಲ್ಲರಿಗೂ ಗೊತ್ತೇ ಇದೆ. ಹೀಗೆ ವಿಭಕ್ತಾನುಭವವೇ ಸ್ವಪ್ನದ ಜ್ಞಾನವು. ಭ್ರಾಂತಿಯೂ ವಿಭಕ್ತಾನುಭವವೇ ಆಗಿರುತ್ತದೆ. ಅದು ನಿತ್ಯ ಸತ್ಯಜ್ಞಾನವಾಗಿರುವುದಿಲ್ಲ. ಅವು ಮಿಥ್ಯೆಯೇ.

೩. ವಿವಿಕ್ತಾನುಭವ ಎಂದರೆ ತುರೀಯ ಜ್ಞಾನಕ್ಕೆ ಹೆಸರು. (ಇದನ್ನು ಎಚ್ಚರದಲ್ಲಿ ಎಚ್ಚರ ಎನ್ನಬೇಕು) ಮನುಷ್ಯನು ನಿತ್ಯ ಅನಿತ್ಯ ವಸ್ತುಜ್ಞಾನ ಮಾಡಿಕೊಂಡು, ವಿಚಾರಪೂರ್ವಕವಾಗಿ ಸತ್ಯ ಮಿಥ್ಯಾವಸ್ತುಗಳ ಸ್ವರೂಪವನ್ನು ತಿಳಿದು ನಿಶ್ಚಯಮಾಡಿಕೊಂಡಾಗ ಅವನಿಗೆ ನಿರ್ವಿಶೇಷ ಸ್ವರೂಪದ ಆತ್ಮನೊಬ್ಬನೇ ಪರಮಾರ್ಥ ಸತ್ಯ ಎಂದು ಅರಿವಾಗುವುದು. ಈ ವಿವೇಚನಾ ಕ್ರಮದಿಂದ ಉಂಟಾಗುವ ವಿವೇಕ = ನಿಶ್ಚಯ ಜ್ಞಾನವೇ ವಿವಿಕ್ತಾನುಭವವಾಗಿರುತ್ತದೆ. ಇದು ಸಾಕ್ಷಾದ್ ಆತ್ಮಾನುಭವರೂಪದ ಬ್ರಹ್ಮಜ್ಞಾನವೇ ಆಗಿರುವುದು ಎಂದು ಗೊತ್ತುಮಾಡಿಕೊಳ್ಳಬೇಕು. ಆತ್ಮನು ಬ್ರಹ್ಮವೇ ಆಗಿರುವನಷ್ಟೆ. ಈ ಜ್ಞಾನವು ಮೊದಲಿಗೆ ಮನೋಬುದ್ಧಿವೃತ್ತಿರೂಪದಿಂದ ಉಂಟಾಗುವುದಾದರೂ ಯುಕ್ತಿ ಮನನ ನಿರ್ಣಯದಿಂದ = ಫಲಿತಾಂಶದಲ್ಲಿ = ವಿವೇಕ ವಿಜ್ಞಾನವೆಂಬ ಅನುಭವ ರೂಪದ ಆತ್ಮಾಕಾರವಾಗಿಯೇ ಹೊಳೆಯುವುದರಿಂದ, ಉಳಿಯುವುದರಿಂದ ಅರಿಯುವಾತನ ನಿತ್ಯ ಆತ್ಮಜ್ಞಾನ ರೂಪವೇ ಆಗಿರುವುದು. ಅಂದರೆ ತಾನು ತನ್ನನ್ನೇ ತನ್ನಿಂದಲೇ ಅರಿಯುವುದಾಗುವುದು. ಅಂದಾಗ ತ್ರಿಪುಟೀದ್ವೈತ ವಿರುವುದಿಲ್ಲ. ಜ್ಞಾತೃ, ಜ್ಞೇಯ, ಜ್ಞಾನ ಈ ಮೂರೂ ಒಂದೇ ಆಗಿರುವುದು. ಆದ್ದರಿಂದ ಈ ಜ್ಞಾನಾನುಭವವು ಮನೋಬುದ್ಧಿ ವೃತ್ತಿರೂಪವಾದುದಲ್ಲ. ಅವಶಿಷ್ಟವಾದ = ಬಾಧೆಗೆ ಒಳಗಾಗದ = (ಫಲರೂಪವಾದ) ಸಾಕ್ಷಾದಾತ್ಮಜ್ಞಾನಸ್ವರೂಪವೇ ಆಗಿರುವುದು. ಅವಸ್ಥಾತ್ರಯದಲ್ಲಿ ಉಂಟಾಗುವ, ತೋರುವ, ಇರುವ ಜ್ಞಾನಕ್ಕಿಂತ ಈ ಅನುಭವವು ವಿಲಕ್ಷಣವಾಗಿರುವುದರಿಂದ ಈ ಆತ್ಮಾನುಭವರೂಪದ ಜ್ಞಾನವನ್ನು ತುರೀಯ ಜ್ಞಾನ ಎಂದು

ತಿಳಿಸಿಕೊಡುತ್ತಾರೆ. (ಇದೇ ಎಚ್ಚರದಲ್ಲಿ ಎಚ್ಚರ ಎನ್ನುವುದು) ಇಂತಹ ಜ್ಞಾನವೇ ಇಲ್ಲ ಎಂದು ಬಗೆಯಬಾರದು. ಏಕೆಂದರೆ ನಾನು ಇದ್ದೇನೆಂಬ ಅರಿವು ಎಲ್ಲರಿಗೂ ಯಾವಾಗಲೂ ಇದ್ದೇ ಇರುವುದಷ್ಟೆ! ಇದೇ ನಿಜದಲ್ಲಿ ಆತ್ಮಾನುಭವವಾಗಿರುತ್ತದೆ. ಆದರೆ ಈ ವಾಸ್ತವಾಂಶವು ಎಲ್ಲರಿಗೂ ತಿಳಿದಿರುವುದಿಲ್ಲ. ವಿಚಾರಮಾಡಿಕೊಳ್ಳದಿದ್ದರೆ ನಿಜವು ಗೊತ್ತಾಗುವುದಿಲ್ಲ. ನಾನು ಇದ್ದೇನೆಂದು ಹೇಳುವವನಿಗೆ ತಾನಿರುವುದು ಮೊದಲೇ ತಿಳಿದಿರುತ್ತದಲ್ಲವೆ! ತಿಳಿದಿರುವುದನ್ನು ತಾನೇ ಹೇಳುತ್ತಾರೆ. ಹಾಗೆ ತಾನು ಇರುವುದನ್ನು ಗೊತ್ತುಮಾಡಿಕೊಂಡುದು ತನ್ನಿಂದಲೇ ಆಗಿರುತ್ತದೆ. ಮನ ಆದಿ ಇಂದ್ರಿಯ ಸಾಧನಗಳಿಂದಲ್ಲ. ಬೇರೆ ಬಾಹ್ಯವಸ್ತುವನ್ನು ತಿಳಿದುಕೊಳ್ಳುವುದಕ್ಕೆ ಮನಸ್ಸು ಸಾಧನವಷ್ಟೇ ಹೊರತು ತನ್ನನ್ನು ತಾನು ಅರಿಯುವುದಕ್ಕೆ ಬೇರೆ ಸಾಧನ ಇರುವುದಿಲ್ಲ. ಅಂದಾಗ ತಾನಿರುವುದನ್ನು ಸ್ವಾನುಭವದಿಂದ ತಾನೇ ಅರಿತುಕೊಂಡಿರುತ್ತಾನೆ ಎಂದಾಯಿತು. ಆದ್ದರಿಂದ ಸರ್ವರಿಗೂ ತಾವು ಇರುವ ಅನುಭವವು ತನಗೆ ತಾನೇ ಇದ್ದೇಬಿಟ್ಟಿರುತ್ತದೆ ಎಂದು ನಿಶ್ಚಯವಾಗುವುದು. ಇದನ್ನೇ ಆತ್ಮನು ಸ್ವಯಂಪ್ರಕಾಶ ಎನ್ನುವುದು. ಇಂತಹ ಅರಿವು ಇರುವ ಸ್ವಭಾವದ ತಮ್ಮ ಸ್ವರೂಪವನ್ನು ಅಂದರೆ ಆತ್ಮನನ್ನು ಜಡಸ್ವರೂಪದ ದೇಹೇಂದ್ರಿಯಾದಿಗಳಿಂದ ವಿವೇಚಿಸಿಕೊಂಡು ಪೃಥಕ್ಕಾಗಿ ತಿಳಿದುಕೊಂಡಾಗ ಪ್ರಮಾತೃ ಮನುಷ್ಯನಿಗೆ ತಾನು ನಿತ್ಯ ಜ್ಞಾನಾನಂದ ಸ್ವಭಾವದ ಆತ್ಮನೇ ಎಂಬ ಅರಿವಾಗುವುದು. ಇದೇ ಆತ್ಮಜ್ಞಾನ = ಬ್ರಹ್ಮಜ್ಞಾನ = ತುರೀಯ ಜ್ಞಾನ, ಇದೇ ಅಪರೋಕ್ಷಜ್ಞಾನ, ವಿವಿಕ್ತಾನುಭವವಾಗಿರುತ್ತದೆ.

ಈ ವಿಚಾರವು ಜನರಿಗೆ ಸುಲಭವಾಗಿ ತಿಳಿಯುವುದಿಲ್ಲ. ಏಕೆಂದರೆ ಜಾಗ್ರದ್ ವ್ಯವಹಾರಕಾಲದಲ್ಲಿ ಇಂದ್ರಿಯಗಳ ಮೂಲಕ ಹೊಸಹೊಸ ವಿಷಯಗಳ ಜ್ಞಾನವು ಅಂದರೆ ವಿಶೇಷ ಜ್ಞಾನವು ಉಂಟಾಗುತ್ತಿರುವುದು. ಇದೇ ಸ್ವರೂಪಕ್ಕೆ ಆವರಣವು. ನಿರ್ವಿಶೇಷ ಜ್ಞಾನಕ್ಕೆ ಮುಸುಕು. ಆ ವಿಶೇಷ ಜ್ಞಾನದಲ್ಲಿ ಆತ್ಮಪ್ರಕಾಶರೂಪದ ಶುದ್ಧಜ್ಞಾನವು ಅಡಗಿ ಇರುವುದು, ಅಂತರ್ಗತವಾಗಿರುವುದು. ಹೀಗೆ ವಿಷಯಜ್ಞಾನ ಮತ್ತು ಆತ್ಮಪ್ರಕಾಶಜ್ಞಾನ ಈ ಎರಡೂ ಸಂಕೀರ್ಣವಾಗಿರುವುದರಿಂದ ಶುದ್ಧಜ್ಞಾನವು ವಿವಿಕ್ತವಾಗುವುದಿಲ್ಲ. ಸ್ಫುಟವಾಗಿ ತಿಳಿಯುವುದಿಲ್ಲ. ಸ್ವಪ್ನ ಮತ್ತು ಜಾಗರ ಈ ಎರಡು ಅವಸ್ಥೆಗಳಲ್ಲೂ ಈ ನಿರ್ವಿಶೇಷಜ್ಞಾನ ಮತ್ತು ಸವಿಶೇಷಜ್ಞಾನ ಎರಡೂ ಬೆರೆತುಕೊಂಡೇ ಇರುವುದರಿಂದ ಅವುಗಳ ವಿವೇಕವು ಬಹು ಕಠಿಣ. ಸುಲಭವಾಗಿ ಇದೇ ಶುದ್ಧಜ್ಞಾನ ಎಂದು ಗೊತ್ತಾಗುವುದಿಲ್ಲ. ಎರಡು ದೀಪ ಪ್ರಕಾಶಗಳು ಬೆರೆತುಕೊಂಡಿದ್ದರೆ ಆ ಪ್ರಕಾಶಗಳನ್ನು ವಿವೇಚನೆಮಾಡಿಕೊಳ್ಳಲು ಸುಲಭವಲ್ಲ.

ಆದ್ದರಿಂದ ನಿದ್ರಾಸ್ಥಿತಿಯನ್ನು ಪರೀಕ್ಷಿಸಿದರೆ ಈ ಜ್ಞಾನದ ವಿವಿಕ್ತತೆಯು ತಿಳಿಯುವುದು. ಸುಷುಪ್ತಿಯಲ್ಲಿ ಆತ್ಮನಿಗೆ ದೇಹೇಂದ್ರಿಯಗಳ ಸಂಬಂಧ ಪೂರ್ತಿ ತಪ್ಪಿರುತ್ತದೆ. ಆರೋಪ- ಅಧ್ಯಾಸ ಇರುವುದಿಲ್ಲ. ಆತ್ಮನು ಕೇವಲ ಪ್ರಾಜ್ಞಸ್ವರೂಪದಿಂದಿರುತ್ತಾನೆ. ಪ್ರಮಾತೃ ರೂಪದಿಂದಿರುವುದಿಲ್ಲ. ವಿಶೇಷ ವಿಷಯ ಜ್ಞಾನವೂ ಇರುವುದಿಲ್ಲ. ಇದೇ ಆತ್ಮನ ನಿರ್ವಿಶೇಷ ಜ್ಞಾನಸ್ಥಿತಿ. ಆದರೆ ನಿದ್ರಾಸುಖವನ್ನು ಅನುಭವಸಿಕೊಂಡಿರುತ್ತಾನೆ. ಆಗ ಸುಖಜ್ಞಾನಾನುಭವಕ್ಕೆ ಮನ ಆದಿ ಸಾಧನವೇನೂ ಇರುವುದಿಲ್ಲ. ಹೀಗೆ ಸುಷುಪ್ತಿ ಸ್ಥಿತಿಯಲ್ಲಿ ಆತ್ಮನು ಸುಖಾನುಭವರೂಪದಲ್ಲಿರುವುದು ತಿಳಿಯುವುದು. ಅನುಭವವೇ ಜ್ಞಾನ. ಜ್ಞಾನವೇ ಆತ್ಮನು. ಆತ್ಮನೇ ಸುಖ ಆನಂದ ಸ್ವರೂಪನು. ಅಂದಾಗ ಆತ್ಮನು ಜ್ಞಾನಾನಂದರೂಪವೇ ಎಂದಾಯಿತು. ನಿದ್ರಾಕಾಲದಲ್ಲಿ ಆತ್ಮನಿಗೆ ಜ್ಞಾನವೇ ಇರುವುದಿಲ್ಲೆಂದು ಬಗೆಯಬಾರದು. ಏಕೆಂದರೆ ನಿದ್ದೆಯಿಂದ ಎಚ್ಚತ್ತ ಮನುಷ್ಯನು ಸುಖವಾಗಿ ನಿದ್ದೆ ಆಯಿತು ಎಂದು ತನ್ನ ಅನುಭವವನ್ನು ಸ್ಮರಿಸಿಕೊಂಡು ಹೇಳುತ್ತಾನಲ್ಲವೇ ? ಸ್ಮರಣೆಯು ಅನುಭವಪೂರ್ವಕವಾಗಿಯೇ ಇರುವುದು ನಿಯಮ. ಅನುಭವಿಸದೇ ಇರುವುದನ್ನು ಸ್ಮರಿಸಲಾಗುವುದಿಲ್ಲ. ಇದೇ ಯುಕ್ತಿ. ಆದ್ದರಿಂದ ಸುಷುಪ್ತಿಯಲ್ಲಿ ಅನುಭವ ಇದ್ದೇ ಇರುವುದೆಂದು ತಿಳಿಯಬೇಕು. ಆಗ ಆತ್ಮನೇ ಇರಲಿಲ್ಲ ಎಂದೂ ಹೇಳುವಂತಿಲ್ಲ. ಏಕೆಂದರೆ ಆತ್ಮನೇ ಇಲ್ಲದಿದ್ದರೆ ಆ ನಿದ್ರಾಸ್ಥಿತಿಯಿಂದ ದೇಹೇಂದ್ರಿಯಗಳನ್ನು ಎಚ್ಚರಪಡಿಸುವರಾರು? ಆತ್ಮನೇ ಅವನ್ನು ಚೇತನಗೊಳಿಸುವನು. ಇಷ್ಟು ವಿಚಾರಗಳಿಂದ ನಿಶ್ಚಯಿಸಿಕೊಳ್ಳಬೇಕಾದ್ದೇನೆಂದರೆ ಆತ್ಮನು ಸರ್ವದಾ ಇರುವನು. ಅವನು ನಿರ್ವಿಶೇಷ ಜ್ಞಾನಸ್ವರೂಪನೇ. ಅವನಿಗೆ ಜ್ಞಾನವುಂಟಾಗಲು ಸಾಧನ-ಪ್ರಮಾಣವೇನೂ ಬೇಕಾಗಿಲ್ಲ. ಅವನು ಸದಾ ದೃಗ್ರೂಪ ಸಾಕ್ಷೀ ಆಗಿರುತ್ತಾನೆ. ಮತ್ತು ಜ್ಞಾನಸ್ವರೂಪದ ಸ್ವಯಂಪ್ರಕಾಶನಾಗಿರುತ್ತಾನೆ. ಯಾವಾಗಲೂ ವಿವಿಕ್ತಾನುಭವರೂಪದ ನಿರ್ವಿಶೇಷಜ್ಞಾನ ಸ್ವಭಾವನೇ ಆಗಿರುತ್ತಾನೆ. ಹೀಗೆಂಬುದನ್ನು ಅರಿತುಕೊಂಡು ಪ್ರಮಾತೃವು = ಜಿಜ್ಞಾಸುವು ತನ್ನ ದೇಹೇಂದ್ರಿಯ ಪ್ರಾಣಮನ ಆದಿಗಳನ್ನು ಹೊರತುಪಡಿಸಿಕೊಂಡು ನಾನು ದೇಹ ಅಲ್ಲ ಎಂದು ಅವನ್ನೆಲ್ಲಾ ಹೊರಕ್ಕೆ ತಳ್ಳಿ, (ನಿರಾಕರಣೆ = ಅಪವಾದ ಮಾಡಿಕೊಂಡು) ತನ್ನಲ್ಲಿ ತಾನೇ ಹಿಂದಕ್ಕೆ ಸರಿದು ಸ್ವಮಾತ್ರ ನಿಷ್ಠನಾಗಿ ತಾನು ಆತ್ಮನು, ಸನ್ಮಾತ್ರ, ಚಿನ್ಮಾತ್ರ, ಆನಂದಮಾತ್ರ = ಸಚ್ಚಿದಾನಂದ ಎಂದರಿತುಕೊಳ್ಳುವುದೇ ನಿಶ್ಚಯದಲ್ಲಿ ನೆಲೆ ನಿಲ್ಲುವುದೇ ತುರೀಯಾನುಭವವೆಂಬ ವಿವಿಕ್ತಾನುಭವವಾಗಿದೆ. ಇದೇ ಅಪರೋಕ್ಷ = ಸಮ್ಯಗ್

ಜ್ಞಾನವಾಗಿರುತ್ತದೆ. ಸರ್ವದಾ ನಿಜ ಆತ್ಮನಿರುವುದೇ ಹೀಗೆ. ಆತ್ಮನು ಹೇಗೆ ಇರುವನೋ, ಹಾಗೆ ಇದ್ದಂತೆ ಅರಿಯುವುದೇ ಸಮ್ಯಗ್‌ಜ್ಞಾನವೆನ್ನುವುದು. ಈ ನಿಜ ಸ್ಥಿತಿಯನ್ನರಿಯದಿರುವುದೇ ಅಜ್ಞಾನವು. ನಾನು ದೇಹಾದಿ ರೂಪ ಎಂದು ತಪ್ಪಾಗಿ ತಿಳಿಯುವುದೇ ಮಿಥ್ಯಾಜ್ಞಾನವು.

ಹೀಗೆ ವಿಚಾರ ಪ್ರಮಾಣದಿಂದ ನಿಶ್ಚಯವಾದ ಬಳಿಕ ಈಗ ಮತ್ತೆ ಈ ಮೂರು ಬಗೆಯ ಸತ್ಯಗಳನ್ನು ಮತ್ತು ಮೂರು ಬಗೆಯ ಜ್ಞಾನಾನುಭವಗಳನ್ನು ತೂಗಿನೋಡಿ ಪರೀಕ್ಷಿಸಿದರೆ ಗೊತ್ತಾಗುವುದೇನೆಂದರೆ ಪಾರಮಾರ್ಥಿಕಸತ್ಯವೇ ನಿಜ ನಿತ್ಯ ಸತ್ಯ. ಅಂತಿರುವ ಏಕಚೇತನ ವಸ್ತುವೇ ಪರಮಾರ್ಥವಾದುದು ಮತ್ತು ವಿವಿಕ್ತಾನುಭವವೇ ನಿಜವಾದ ನಿತ್ಯ ಶುದ್ಧ ಜ್ಞಾನವು. ಅಂತಹ ಜ್ಞಾನಸ್ವರೂಪವೇ ಆತ್ಮನು. ಅಂದಾಗ ಸತ್ಯವೇ ಜ್ಞಾನವು. ಜ್ಞಾನವೇ ಸತ್ಯಪರಮಾರ್ಥವು. ಇಂತಹ ಸತ್ಯಜ್ಞಾನಸ್ವರೂಪವೇ ನಿಜ ಆತ್ಮನಾಗಿದ್ದಾನೆ. ಹೀಗೆಂದು ಕಂಡುಕೊಳ್ಳುವುದೇ ಅಪರೋಕ್ಷ ಸಮ್ಯಗ್‌ಜ್ಞಾನವಾಗಿದೆ. ಇದು ಇಂದ್ರಿಯ ಗೋಚರವಾದುದಲ್ಲ. ಮೌಢ್ಯವಲ್ಲದ ತರ್ಕ, ವಿಚಾರ, ವಿವೇಕ, ಜ್ಞಾನ = ಸ್ವಾನುಭವ ಎಂಬ ಪ್ರಮಾಣದಿಂದ = ಪ್ರಕಾಶದಿಂದ ಕಂಡುಕೊಳ್ಳುವುದಾಗಿದೆ. ಇದೇ ಆತ್ಮನ ಸ್ವಯಂಪ್ರಕಾಶವು.



## ತತ್ತ್ವಜ್ಞಾನ ಮಾಡಿಕೊಳ್ಳಲು ಇರುವ ಬಿಕ್ಕಟ್ಟು

ಜೀವಾತ್ಮನು ಈ ಲೋಕದಲ್ಲಿ ಹುಟ್ಟದಿದ್ದರೆ, ಮನುಷ್ಯ ಶರೀರೀ ಆಗದಿದ್ದರೆ ಅವನಿಗೆ ತತ್ತ್ವಜ್ಞಾನಮಾಡಿಕೊಳ್ಳಲು ಸಾಧನಗಳಾದ ಮನೋಬುದ್ಧಿ ಇಂದ್ರಿಯಗಳು ವ್ಯಕ್ತವಾಗಿ ಇರುವುದಿಲ್ಲವಾದ್ದರಿಂದ ಅವನು ತತ್ತ್ವಜ್ಞಾನಮಾಡಿಕೊಳ್ಳಲೂ ಸಾಧ್ಯವಿಲ್ಲ. ಮುಕ್ತಿ ಪಡೆಯಲೂ ಶಕ್ಯವಾಗುವುದಿಲ್ಲ. ಏಕೆಂದರೆ ಯಾರ ಮನೋಬುದ್ಧಿವೃತ್ತಿಗಳಲ್ಲಿ ಪರಮಾರ್ಥ ತತ್ತ್ವವಿವೇಕ ವಿಚಾರವು ಒಡಮೂಡಿ ದೃಢವಾಗಿರುವುದೋ ಅವರೇ ಪರಮಪುರುಷಾರ್ಥ ಭಾಗಿಗಳಾಗುವರು. ಅಂತಲ್ಲದವರು ಸಂಸಾರಿಗಳೇ ಆಗಿರುತ್ತಾರೆ. ಬುದ್ಧಿವೃತ್ತಿಗೆ ವಿಷಯವಾಗದದು ಪುರುಷಾರ್ಥವಾಗುವುದಿಲ್ಲ. ಆದ್ದರಿಂದ ಸುಷುಪ್ತಿಯು ಮೋಕ್ಷವಲ್ಲ. ಪರಮಪುರುಷಾರ್ಥವಾದ ನಿಃಶ್ರೇಯಸ್ಸನ್ನು ಪಡೆಯಲು ಈ ಮಾನವ ಆವರ್ತದಲ್ಲಿ ಜೀವರು ಜನ್ಮವನ್ನು ಕೋರಿಕೊಳ್ಳಬೇಕು. ಮನುಷ್ಯ ಜನ್ಮದಲ್ಲೇ ತತ್ತ್ವಜ್ಞಾನ ಮಾಡಿಕೊಳ್ಳಲು ಸಾಧ್ಯ. ಬೇರೆ ಜನ್ಮದಲ್ಲಿ ಶಕ್ಯವಾಗುವುದಿಲ್ಲ. ಆದ್ದರಿಂದಲೇ ಮನುಷ್ಯ ಜನ್ಮವು ಅಮೂಲ್ಯವಾದುದು.

ಕೋರಿಕೊಂಡಂತೆ ಮನುಷ್ಯಜನ್ಮಲಾಭವಾದ ಮಾತ್ರಕ್ಕೆ ಇಷ್ಟಾರ್ಥವು ಕೈಗೂಡಲಾರದು. ಏಕೆಂದರೆ ಇಲ್ಲಿ ಜನ್ಮಪ್ರಾಪ್ತಿ ಆಗುವುದರೊಡನೆಯೇ ಮನುಷ್ಯನಿಗೆ ಆತ್ಮಾನಾತ್ಮರ ಅಂದರೆ ದೇಹ-ಆತ್ಮ ಇವರ ಅನ್ಯೋನ್ಯ ತಾದಾತ್ಮ್ಯಧ್ಯಾಸ = ಮಿಥ್ಯಾಜ್ಞಾನವೇ ನಿಸರ್ಗಸಿದ್ಧವಾಗಿ ಗಂಟುಬಿದ್ದುಬಿಡುವುದು. ವಿವೇಕವಿಲ್ಲದ ಮನುಷ್ಯರಿಗೆ ಜಗತ್ತು ಮಿಥ್ಯೆ ಎಂಬ ಉಪದೇಶವು ಬುದ್ಧಿಗೆ ಹತ್ತುವುದೇ ಇಲ್ಲ. ಆ ಅಧ್ಯಾಸವಿರುವಾಗ ಮಿಥ್ಯಾಜ್ಞಾನವಿರುವಾಗ ಮನುಷ್ಯನಿಗೆ ಪ್ರಮಾತೃತ್ವ ಉಂಟಾಗಿ ಅವನು ತನ್ನ ಮನ ಆದಿ ಇಂದ್ರಿಯಗಳ ಮೂಲಕವಾಗಿಯೇ ಈ ಬಾಹ್ಯ ವಸ್ತುಗಳ ಜ್ಞಾನಮಾಡಿಕೊಳ್ಳುವ ಅಭ್ಯಾಸ ರೂಢಿಮಾಡಿಕೊಂಡಿರುತ್ತಾನೆ. ಮತ್ತು ಹೀಗೆ ಇಂದ್ರಿಯಪ್ರಮಾಣದಿಂದ ಉಂಟಾಗುವ ಜ್ಞಾನವೇ ಪ್ರಾಮಾಣಿಕವಾದುದು = ಸತ್ಯ ಎಂದೂ ನಂಬಿಕೊಂಡಿರುತ್ತಾನೆ. ಅವನಿಗೆ ಬೇರೇ ತರಹ ವಿವೇಚನೆ - ವಿವೇಕದಿಂದ ಅಂದರೆ ಅಧ್ಯಾರೋಪ ಅಪವಾದ ಕ್ರಮದಿಂದ ಜ್ಞಾನವಾಗುವ ಪರಿಚಯವೇ = ಊಹೆಯೇ ಇರುವುದಿಲ್ಲ. ಜಾಗ್ರತ್ಕಾಲದಲ್ಲಿ ಉಂಟಾಗುವ ಈ ಇಂದ್ರಿಯಜನ್ಯ ಜ್ಞಾನಕ್ಕೆ ಜಾಗ್ರತ್ತಿನಲ್ಲಿ ಅಪೋಹ ಬಾಧೆ ಏನೂ ಉಂಟಾಗುವುದಿಲ್ಲ ವಾದ್ದರಿಂದ ಈ ಬಾಹ್ಯದ ದೇಹಾದಿ ಜಗದ್ವಸ್ತು ವಿಷಯಗಳೆಲ್ಲವೂ ಸತ್ಯವೇ ಎಂಬ ನಂಬಿಕೆಯು ಮನುಷ್ಯನಿಗೆ ದೃಢವಾಗಿರುತ್ತದೆ. ವಿಚಾರ - ವಿವೇಕ ಮಾಡಿಕೊಳ್ಳದೇ ಅಜ್ಞಜನರಂತೆ ದೇಹಾದಿ ಜಗತ್ತು ಸತ್ಯವೆಂದು ನಂಬಿಕೊಂಡಿರುವುದೇ ಸ್ವಾಭಾವಿಕವಾಗಿದೆ. ಆದರೆ ಈ ರೀತಿ ನಾನು ದೇಹೀ ಮನುಷ್ಯ ಎಂದು ತಿಳಿದುಕೊಂಡಿರುವ ತಿಳಿವಳಿಕೆಯು ತತ್ತ್ವಪರಮಾರ್ಥ ವಾಗಿರುವುದಿಲ್ಲ. ಕನಸಿನಂತೆ ಮಿಥ್ಯೆ ಆಗಿರುತ್ತದೆ. ಅದು ಕೇವಲ ವ್ಯಾವಹಾರಿಕ ಸತ್ಯಮಾತ್ರ ಆಗಿರುತ್ತದೆ. ಮನ ಆದಿ ಇಂದ್ರಿಯಗಳು ಬಹಿರ್ಮುಖವಾಗಿಯೇ ಇರುವುವಲ್ಲದೇ ಜನ್ಮಜನ್ಮಾಂತರಗಳ ಕುಸಂಸ್ಕಾರಗಳಿಂದಲೂ ಕೂಡಿರುತ್ತವೆ. ಅವು ಶುದ್ಧವಾಗಿರುವುದಿಲ್ಲವಾದ್ದರಿಂದ ಶುದ್ಧವಾದ ಜ್ಞಾನವೂ ಸುಲಭವಾಗಿ ಉಂಟಾಗಲಾರದು. ಇಂದ್ರಿಯ - ಮನಸ್ಸು ಅನ್ನದಿಂದಲೇ ಹುಟ್ಟಿದ್ದು ಅನ್ನವನ್ನೇ ಅವಲಂಬಿಸಿಕೊಂಡಿರುವುದರಿಂದ ಅದು ಅನ್ನಮಯವಾಗಿರುವುಗಳನ್ನೇ ಅಂದರೆ ಭೌತಿಕವಾದ ವಿಷಯಗಳನ್ನೇ ಗ್ರಹಿಸುತ್ತಾ ಆ ಜ್ಞಾನಗಳನ್ನೇ ಆ ವಸ್ತುಗಳನ್ನೇ ಸತ್ಯವೆಂದು ನಂಬಿಕೊಂಡಿರುವುದು ಸಹಜವಾಗಿರುತ್ತದೆ. ಆದರೆ ಈ ಜ್ಞಾನವು ಪರಮಾರ್ಥ ಸತ್ಯವಾಗಿರುವುದಿಲ್ಲ. ಈ ಜಗತ್‌ಪದಾರ್ಥಗಳೂ ಕೂಡ ಆತ್ಮೈಕ ಮೂಲಕಾರಣದಿಂದಲೇ ಹುಟ್ಟಿಕೊಂಡಿದ್ದು ತನ್ಮಯವೇ ಆಗಿರುತ್ತವೆ. ಆತ್ಮನೂ ಕೂಡ ಸತ್ಯವೇ ಆಗಿದ್ದು ತೋರಿಕೊಳ್ಳುವ ಸ್ವಭಾವದ್ದೇ ಆಗಿದ್ದು ದೇಹಾದಿ ರೂಪದಿಂದಲೇ ಜಗದ್ವಸ್ತುರೂಪ ದಿಂದಲೇ ತೋರುತ್ತಿರುವನು. ಆದ್ದರಿಂದ ದೇಹಾದಿ ಜಗತ್ತು ಮಾಯಾಕೃತ ಎಂಬುದು ಮನುಷ್ಯನಿಗೆ ಗೊತ್ತಾಗುವುದಿಲ್ಲ. ನಾಮರೂಪಗಳು ಮಿಥ್ಯಾ ಎಂದೂ ಅರಿವಾಗುವುದಿಲ್ಲ.

ಇಲ್ಲಿ ಒಂದು ರಹಸ್ಯವಿರುವುದು ಏನೆಂದರೆ ಅಜ್ಞಾನಿಗಳಾದ ಜೀವರು ಹಿಂದೆ ಹಿಂದಿನ ಜನ್ಮಗಳಲ್ಲಿ ಸಮ್ಯಗ್ ಜ್ಞಾನವಿಲ್ಲದ್ದರಿಂದ ದೇಹ ಮತ್ತು ಆತ್ಮ ಇವರಿಬ್ಬರನ್ನು ಕಲಬೆರಿಕೆಮಾಡಿಕೊಂಡು ಆ ರಾಶಿಯನ್ನೇ ನಾನು ನಾನು ಎಂದು ನಂಬಿಕೊಂಡು, ಅದೇ ಅಭಿಮಾನದಿಂದ, (ತನ್ನ ಕರ್ಮಕ್ಕೆ ಫಲ ಆಗಬೇಕೆಂಬ ಉದ್ದೇಶದಿಂದಲೇ) ಧರ್ಮಾದಿ ಕರ್ಮಗಳನ್ನು ಮಾಡಿರುತ್ತಾರೆ ಅಲ್ಲವೇ! ಅದು ತಪ್ಪು ತಿಳಿವಳಿಕೆಯಾಗಿರುತ್ತದೆ. ಹೀಗೆ ತಪ್ಪು ತಿಳಿವಳಿಕೆಯಿಂದ ಕರ್ಮ ಮಾಡಿದ್ದರೂ, ಕರ್ಮಕ್ಕೆ ತಕ್ಕ ಫಲಪ್ರಾಪ್ತಿಯಾಗಲೇಬೇಕಾಗಿರುವುದರಿಂದ ಸರ್ವಜ್ಞ ಸರ್ವಶಕ್ತನಾದ ಈಶ್ವರನು ಮಾಯೆಯಿಂದಲೇ ಜಗತ್ತನ್ನು ಸೃಷ್ಟಿಮಾಡಿ, ಕರ್ಮಕರ್ತೃಗಳಿಗೆ ಫಲಪ್ರಾಪ್ತಿಯಾಗುವಂತೆ ಏರ್ಪಡಿಸಿರುವನು. ಈ ರಹಸ್ಯವು ಎಲ್ಲರಿಗೂ ತಿಳಿದಿರುವುದಿಲ್ಲ. ತತ್ತ್ವವಿಚಾರ ಮಾಡಿಕೊಂಡಾಗ ಪ್ರಪಂಚ ವ್ಯವಹಾರವೆಲ್ಲವೂ ಮಾಯಿಕವಾಗಿರುವುದರಿಂದ ಇಲ್ಲಿ ಕರ್ಮ ಮಾಡಿದುದೂ ಸತ್ಯ ಪರಮಾರ್ಥವಾಗಿರುವುದಿಲ್ಲ. ಈಶ್ವರನು ಸೃಷ್ಟಿಮಾಡಿದುದೂ ಕರ್ಮಫಲ ಕೊಟ್ಟುದುದೂ ಪರಮಾರ್ಥವಾಗಿರುವುದಿಲ್ಲ ಎಂದು ತಿಳಿಯುವುದು. ಅಂದರೆ ಈ ಪ್ರಪಂಚ, ಇಲ್ಲಿ ನಡೆಯುವ, ನಡೆದ ಕರ್ಮ ಮತ್ತು ಕರ್ಮಫಲಾನುಭವ ಈ ಸಕಲ ವ್ಯವಹಾರಗಳೂ ಕನಸಿನಂತೆ ಮಿಥ್ಯೆಯೇ ಆಗಿರುತ್ತವೆ. ಇದೂ ಒಂದು ಬಗೆಯ ಕನಸೇ ಆಗಿರುತ್ತದೆ. ಅಂದರೆ ಅವಿದ್ಯಾ ಸ್ಥಿತಿಯ ಮೋಹ ನಿದ್ದೆಯಲ್ಲಿ ನಡೆಯುವ ತೋರಿಕೊಳ್ಳುವ ವ್ಯವಹಾರವೇ ಸ್ಥಿರ ಸ್ವಪ್ನವು. ಇದು ಕೇವಲ ವ್ಯಾವಹಾರಿಕಸತ್ಯಮಾತ್ರವಾಗಿರುತ್ತದೆ. ಪರಮಾರ್ಥಸತ್ಯವಾಗಿರುವುದಿಲ್ಲ. ಹೀಗೆಂಬುದು ತತ್ತ್ವವಿಚಾರ ಮಾಡಿಕೊಂಡಾಗಲೇ ಗೊತ್ತಾಗುವುದು. ಅನ್ಯಥಾ ತಿಳಿಯುವುದಿಲ್ಲ.

ಲೋಕದ ಮನುಷ್ಯನು ತನ್ನ ನಿಜಸತ್ಯಸ್ವರೂಪವನ್ನು ಅರಿಯದೇ, ಸ್ವಾಭಾವಿಕವಾಗಿ ತನ್ನ ದೇಹೇಂದ್ರಿಯ ಸಂಘಾತವನ್ನೇ ನಾನು, ನಾನು ಎಂದು ತಿಳಿದುಕೊಂಡಿರುವನು. ತಾನು ಸಾಕ್ಷೀರೂಪದ ಶುದ್ಧ ಆತ್ಮನು ಎಂಬುದನ್ನು ತಿಳಿದುಕೊಂಡಿರುವುದಿಲ್ಲ. ದೇಹ ಬೇರೆ, ಸಾಕ್ಷಿ ಬೇರೆ ಎಂಬ ನಿಜವನ್ನು ಅರಿತಿರುವುದಿಲ್ಲ. ದೇಹವನ್ನು ನಾನು ಎಂದು ನಂಬಿಕೊಂಡಿರುವುದು ಮಿಥ್ಯಾಜ್ಞಾನ ಭ್ರಾಂತಿಯಾಗಿರುತ್ತದೆ. ಅಹಂಕಾರವಾಗಿರುತ್ತದೆ. ಪ್ರಮಾತೃ ಆಗಿರುವುದು ನಿಜ ಆತ್ಮನ ಸ್ವಭಾವವಲ್ಲ. ಆತ್ಮನು ಕರ್ತೃವೂ ಅಲ್ಲ, ಭೋಕ್ತೃವೂ ಅಲ್ಲ, ಆತ್ಮನು ಕೇವಲ ಕೂಟಸ್ಥ ಸಾಕ್ಷಿಯಾಗಿರುತ್ತಾ ಕರ್ಮವ್ಯವಹಾರವಿಲ್ಲದೇ ಇರುತ್ತಾನೆ. ನಿತ್ಯ ಶುದ್ಧ ಬುದ್ಧ ಮುಕ್ತ ಸ್ವಭಾವದ ಪರಬ್ರಹ್ಮನೇ ಆಗಿರುತ್ತಾನೆ. ಅರಿಯುವ ಚೈತನ್ಯ ಒಬ್ಬನೇ ಇರುವುದು. ಈ ಅರಿವು ಮನುಷ್ಯನಿಗೆ ಇರುವುದಿಲ್ಲ. ಜೀವನು ಮೋಹಾವೃತನಾಗಿರುತ್ತಾನೆ. ಮೇಲೆ ಹೇಳಿದ ನಾನು

ಎಂಬ ಜ್ಞಾನವು ಅಹಂಕಾರವು ಪ್ರಮಾಣದಿಂದ ಉಂಟಾಗುವುದಿಲ್ಲ, ಅದಕ್ಕೆ ಪ್ರಮಾಣವೂ ಇಲ್ಲ, ಹಾಗೆಂದು ತಿಳಿಯಲು ಪ್ರಯತ್ನವನ್ನೂ ಮಾಡಿರುವುದಿಲ್ಲ, ಆದರೂ ಸ್ವಾಭಾವಿಕವಾಗಿ ಸ್ವಪ್ನದಲ್ಲಿ ಜ್ಞಾನವುಂಟಾಗುವಂತೆ ನಾನು ಮನುಷ್ಯ, ದೇಹೀ ಎಂಬ ಸಾಮಾನ್ಯಜ್ಞಾನ ಉಂಟಾಗುತ್ತಿರುವುದು. ಸರ್ವಭೂತಾನಿ ಸಮ್ಮೋಹಂ ಸರ್ಗೇಯಾಂತಿ (ಗೀತೆಯಲ್ಲಿ) ಇದೇ ಜೀವರಲ್ಲಿರುವ ಸ್ವಾಭಾವಿಕಾಜ್ಞಾನವು ಇದೇ ಅವಿದ್ಯೆಯು ಜೀವಪ್ರಕೃತಿಯಾಗಿರುತ್ತದೆ.

ಈ ವಿಚಾರ ವಿವರಣೆಯಿಂದ ಗೊತ್ತಾಗುವುದೇನೆಂದರೆ ಸ್ವಸ್ವರೂಪಜ್ಞಾನವಿಲ್ಲದ ಮನುಷ್ಯನಿಗೆ ನಿಜಾತ್ಮಜ್ಞಾನಮಾಡಿಕೊಳ್ಳಲು ಮನ ಆದಿ ಶರೀರದ ಆವಶ್ಯಕತೆಯಿರುತ್ತದೆ. ಹೀಗೆ ಆವಶ್ಯಕವಾದ ಶರೀರವು ದೊರೆತಾಗ ಮೊಟ್ಟಮೊದಲಿಗೆ ದೇಹಾತ್ಮತಾದಾತ್ಮ್ಯಾಧ್ಯಾಸವೇ ಜೀವರಿಗೆ ಉಂಟಾಗಿಬಿಡುವುದಾದ್ದರಿಂದ ಶುದ್ಧಜ್ಞಾನವು ಆಗಲು, ಸಮ್ಯಗ್‌ಜ್ಞಾನಮಾಡಿಕೊಳ್ಳಲು ಎಂತಹ ಬಿಕ್ಕಟ್ಟು ಅಡಚಣೆ ಇದೆ ಎಂಬುದು ಗೊತ್ತಾಗುವುದು. ಇದೇ ಮೂಲಾಜ್ಞಾನವು - ಅವಿವೇಕ ಆವರಣವು. ಇದನ್ನೇ ಅವಿದ್ಯಾಗ್ರಂಥಿ ಎಂದೂ ಹೇಳುತ್ತಾರೆ. ಆದ್ದರಿಂದ ಮನುಷ್ಯನು ತಾನೇ ಆತ್ಮಾನಾತ್ಮವಿಚಾರ ಮಾಡಿಕೊಂಡು ಸ್ವಾತ್ಮಸ್ವರೂಪವನ್ನು ಕಂಡುಹಿಡಿಯಬೇಕು. ಸ್ವಪ್ರಬೋಧಂವಿನಾನ್ಯೈವ ಸ್ವಸ್ವಪ್ನೋಹೀಯತೇ ಯಥಾ। ಇದಕ್ಕೆ ಮನುಷ್ಯ ಪ್ರಯತ್ನದ ಆವಶ್ಯಕತೆ ಇರುತ್ತದೆ.

## ಪರಬ್ರಹ್ಮವು ಆತ್ಮನಾದುದು

ನಿರುಪಾಧಿಕ ಬ್ರಹ್ಮ- ಆತ್ಮ ಚೈತನ್ಯವು ಅಪರಿಚ್ಛಿನ್ನ ನಿರ್ವಿಶೇಷ ಆಗಿರುವುದರಿಂದ ಅದು ಅನಿರ್ದೇಶ್ಯವೂ (ಮಾತಿನಿಂದ ಹೇಳಲಿಕ್ಕಾಗದದು) ಮತ್ತು ಅಜ್ಞೇಯವು (ಬುದ್ಧಿಯಿಂದ ತಿಳಿಯಲಿಕ್ಕಾಗದದು) ಆಗಿರುತ್ತದೆ. ಆದರೂ ಅದು ಆತ್ಮಾ ಎನ್ನುವುದಾಗಿದೆ. ಏಕೆಂದರೆ ಸೂತ್ರ - ಅದ್ವೈತಂ ಬ್ರಹ್ಮ ತದ್ ಅಪರೋಕ್ಷಂಸತ್ ಆತ್ಮಾನಾಮ. ಅಂದರೆ ತನಗೆ ಎರಡನೆಯದಿಲ್ಲದ ಬ್ರಹ್ಮಚೈತನ್ಯವು ಮನುಷ್ಯಾದಿ ಪ್ರಾಣಿಗಳಲ್ಲಿ ದೇಹೇಂದ್ರಿಯ ಪ್ರಾಣಾತ್ಮಕನಾಗಿ ಪ್ರತಿಬಿಂಬರೂಪದ ಜೀವಾತ್ಮಾ ಎಂದಾಗಿದ್ದು ಅಪರೋಕ್ಷವೇ ಹಾಗೂ ನಾನು ನಾನು ಎಂದು ಸಾಕ್ಷಾದನುಭವರೂಪವೇ ಆಗಿರುವುದರಿಂದ ಆ ಅದ್ವೈತ ಬ್ರಹ್ಮಚೈತನ್ಯವು ಆತ್ಮಾ (ನಾನು ತಾನು) ಎನ್ನುವುದಾಗಿರುವುದು. ಹೀಗೆ ಬ್ರಹ್ಮವು ಉಪಹಿತನಾಗಿದ್ದು ಮಾಯಾಕಾರಣೋಪಾಧಿಯಿಂದ ಜಗತ್‌ಸೃಷ್ಟಿಕರ್ತಾ ಈಶ್ವರ = ಪರಮಾತ್ಮಾ ಎಂದೂ ಮತ್ತು ಅವಿದ್ಯಾ ಕಾರ್ಯೋಪಾಧಿಯಿಂದ ಜೀವಾತ್ಮಾ ಎಂದಾಗಿರುವುದರಿಂದಲೇ ಆ ಅಜ್ಞೇಯ ವಸ್ತುವನ್ನು ಅರಿಯಲು ಅವಕಾಶವಿರುವುದು. ಆತ್ಮ ಶಬ್ದಕ್ಕೆ ಸತ್ಯಸ್ವರೂಪವುಳ್ಳ ವಸ್ತು

ಎಂಬ ಅರ್ಥವೂ ಪ್ರಸಿದ್ಧವಾಗಿದೆ. ಆದ್ದರಿಂದಲೇ ಆ ನಿರ್ವಿಶೇಷ ಚೈತನ್ಯಕ್ಕೆ ಉಪಾಧಿ ನಿಮಿತ್ತದಿಂದ ಆತ್ಮಾ ಎಂಬ ವಿಶೇಷ ನಾಮಧೇಯ ಉಂಟಾಗಿದೆ. ಹೀಗೆ ಆತ್ಮನನ್ನು ಅರಿಯಲು ಅವಕಾಶವಿರುವುದರಿಂದಲೇ ಆ ನಿರ್ವಿಶೇಷ ಚೈತನ್ಯವಸ್ತುವನ್ನು ಅನೇಕ ಮೇಧಾವಿ ಮಹಾ ಪುರುಷರು ಆತ್ಮಾನಾತ್ಮ ತತ್ತ್ವ ವಿವೇಚನೆ ಮಾಡಿಕೊಂಡು ತಮ್ಮ ದೇಹ ಹೃದಯದಲ್ಲೇ ಆ ಬ್ರಹ್ಮಾತ್ಮ ಪುರುಷೋತ್ತಮನನ್ನು ಕಂಡುಕೊಂಡು ಕೃತಕೃತ್ಯರೂ, ಧನ್ಯರೂ, ಅಮೃತರೂ ಆದರೆಂದು ಪುರಾಣೇತಿಹಾಸಗಳಿಂದ ತಿಳಿಯುತ್ತಿದೆ.

ನಾಮರೂಪ ವಿಶೇಷವೇನೂ ಇಲ್ಲದ ನಿರುಪಾಧಿಕ ಬ್ರಹ್ಮವು ಆಕಾಶದಂತೆ ಸರ್ವತ್ರ ವ್ಯಾಪ್ತವಾಗಿದ್ದು ಮನುಷ್ಯನ ಮನೋಬುದ್ಧಿಗಳಿಗೆ ವಿಷಯನಾಗದಿದ್ದರೂ ಉಪಾಧಿ ಸಂಬಂಧದಿಂದ ಇರುವಾಗ ಅವನು ಅನುಭವಗಮ್ಯನೇ ಆಗಿರುವನು. ಯೋಗಿಗಳಿಗೆ ಯೋಗದಿಂದ ತಿಳಿಯಲು, ಹೊಂದಲು, ಮುಟ್ಟಲು ಸಿಕ್ಕುವನು. ಆ ಚೇತನನನ್ನೇ ಮನುಷ್ಯರು ನಾನು ನಾನು ಎಂದು ಬಗೆಯುತ್ತಿರುವರು. ಆತುಕೊಂಡಿರುವರು. ಆದ್ದರಿಂದ ಆ ನಿರತಿಶಯ ಚೇತನನಿಗೆ ಅವ್ಯಕ್ತ ಮಾಯಾಶಕ್ತಿ ಎಂಬ ಸಮಷ್ಟಿ ಕಾರಣೋಪಾಧಿಯಿಂದ ಪರಮಾತ್ಮಾ - ಈಶ್ವರ ಎಂಬ ಸಂಕೇತ = ನಾಮಧೇಯ ಉಂಟಾದುದು. ಆ ಚೇತನನಿಗೇ ಅವಿದ್ಯಾ ಮಾಯಾವ್ಯಷ್ಟಿ ವ್ಯಕ್ತ ಕಾರ್ಯ = ದೇಹ ಉಪಾಧಿಯಿಂದ ಜೀವಾತ್ಮಾ ಎಂಬ ಹೆಸರು ಉಂಟಾಗುವುದು. ಹೀಗೆ ಆ ನಿರ್ವಿಶೇಷ ಅದ್ವಿತೀಯ ಚೇತನಕ್ಕೆ ಉಪಾಧಿನಿಮಿತ್ತದಿಂದ ಅನುಭವಗಮ್ಯನಾಗಿರುವುದರಿಂದಲೇ ಸವಿಶೇಷತ್ವವು ಸಂಭವಿಸಿ ಆತ್ಮಾ ಎಂಬ ಸಂಕೇತವೇ ಪ್ರಧಾನವಾದ ವಿಶೇಷವಾಗುವುದು. ಏಕೆಂದರೆ ಆತ್ಮಾ ಎಂದರೆ (ಲಕ್ಷಣ)-

ಯಚ್ಚಾಪ್ನೋತಿ ಯದಾದತ್ತೇ ಯಚ್ಚಾತ್ತಿ ವಿಷಯಾನಿಹ।
ಯಚ್ಚಾಸ್ಯ ಸಂತತೋ ಭಾವಃ ತಸ್ಮಾದಾತ್ಮೇತಿ ಕಥ್ಯತೇ॥

ಚೈತನ್ಯವು ಸರ್ವತ್ರ ಅಂದರೆ ಎಲ್ಲಾ ನಾಮರೂಪ ವಸುಗಳ ಒಳಗೂ ಹೊರಗೂ ತುಂಬಿಕೊಂಡು, ಪ್ರಕಾಶಪಡಿಸುವುದು, ಸ್ವಯಂ ಪ್ರಕಾಶಿಸುವುದು, ಎಲ್ಲವನ್ನೂ ಗ್ರಹಿಸುವುದು, ಸ್ವೀಕರಿಸುವುದು. ಅದು ಚೇತನವಾಗಿರುವುದರಿಂದ ಎಲ್ಲವನ್ನೂ ಅರಿಯುವುದು ಮತ್ತು ಭಕ್ಷಿಸುವುದು, ಶಬ್ದಾದಿ ವಿಷಯಗಳನ್ನು ಅನುಭವಿಸುವುದು ಮತ್ತು ಅದು ನಿರಂತರ ವ್ಯಾಪಿಸಿಕೊಂಡಿರುವುದು. ಜನ್ಮಾಂತರ, ಲೋಕಾಂತರಗಳಲ್ಲೂ ಮತು ಅವಸ್ಥಾತ್ರಯದಲ್ಲೂ ಇರುವುದು. ಹೀಗೆ ಶಬ್ದಾರ್ಥಾನು ಗುಣವಾಗಿ ಆ ನಿರ್ವಿಶೇಷ ಚೇತನಕ್ಕೆ ಉಪಹಿತನಾಗಿರುವಾಗ ಆತ್ಮಾ ಎಂಬ ಹೆಸರು ಉಂಟಾಗಿರುವುದು. ಆತ್ಮಾ ಎಂದರೆ ಸತ್ಯವಾದ ಸ್ವರೂಪ ಎಂಬ ಅರ್ಥವೂ ಇರುವುದು. ಅಂದಾಗ ಉಪಹಿತ ಚೇತನಕ್ಕೆ ಆತ್ಮಾ ಎಂಬ ಹೆಸರು

ಪ್ರಾಪ್ತವಾಗುವುದು. ಈ ಶ್ಲೋಕದಿಂದ ತಿಳಿಯುವ ಸ್ವರೂಪ- ಲಕ್ಷಣವು ಸೋಪಾಧಿಕನಾದ ಸೃಷ್ಟಿಕರ್ತನಾದ ಮಾಯಾವೀ ಈಶ್ವರ = ಪರಮಾತ್ಮನಲ್ಲಿಯೂ, ಸೋಪಾಧಿಕನಾದ ಸಂಸಾರೀ ಮನುಷ್ಯ ಜೀವಾತ್ಮನಲ್ಲಿಯೂ ಸಮನ್ವಿತವಾಗಿರುತ್ತದೆ. ಹೀಗೆ ಏಕ ಬ್ರಹ್ಮಚೈತನ್ಯವೇ ಉಪಾಧಿ ವಿಶಿಷ್ಟನಾಗಿರುವಾಗ = ಅಭೇದದಿಂದಿರುವಾಗ ಪರಮಾತ್ಮಾ, ಜೀವಾತ್ಮಾ ಎಂದಾಗಿರುತ್ತಾನೆ.

ಚೈತನ್ಯಸ್ವರೂಪದ ಏಕೈಕ ಚೇತನನು ಆಕಾಶದಂತೆ, ಪ್ರಕಾಶದಂತೆ ಸರ್ವತ್ರ ವ್ಯಾಪ್ತನಾಗಿರುವುದರಿಂದಲೇ (ಲಿಂಗಶರೀರವೆಂಬ ಸೂಕ್ಷ್ಮಶರೀರ ಉಪಾಧಿ) ವಿಶಿಷ್ಟರಾದ ಮನುಷ್ಯಾದಿ ಪ್ರಾಣಿಗಳಲ್ಲಿ ಆ ಚೈತನ್ಯವೇ ನಾನು ನಾನು ಎಂದು ತನ್ನ ಜ್ಞಾನರೂಪದಿಂದಲೇ ತೋರಿಕೊಂಡಿರುತ್ತಾನೆ. ಆದ್ದರಿಂದ ಜೀವಾತ್ಮನಾಗಿರುತ್ತಾನೆ. ಭೂ ಜಲಾದಿ ಜಡ ವಸ್ತುಗಳಲ್ಲಿ ಸತ್ತಾ ಸ್ಫೂರ್ತಿ (ಇರುವಿಕೆ, ತೋರುವಿಕೆ) ರೂಪದಿಂದ ತೋರಿಕೊಂಡಿರುತ್ತಾನೆ. ಆದ್ದರಿಂದಲೇ ಪ್ರಪಂಚದಲ್ಲಿ ಚೇತನ ಮತ್ತು ಜಡ ಎಂಬ ವಸ್ತುಭೇದವು ಇರುವುದು. ಸ್ಥೂಲ ಶರೀರ ಮಾತ್ರ ಇರುವ ಚೈತನ್ಯ ವಸ್ತುವೇ ಜಡಪದಾರ್ಥವು, ಆ ಚೈತನ್ಯಕ್ಕೆ ಉಪಾಧಿಯಾಗಿ ಸ್ಥೂಲಶರೀರವೂ ಮತ್ತು ಅದರಲ್ಲಿ ಚಿತ್‌ಪ್ರತಿಬಿಂಬವುಳ್ಳ ಸೂಕ್ಷ್ಮಶರೀರವೂ (ದೇಹದ್ವಯ) ಇದ್ದರೆ ಆಗ ಪ್ರಾಣೀ ಚೇತನವ್ಯಕ್ತಿ ಎಂದಾಗುವುದು.

ಹೀಗೆ ಅಖಂಡೈಕಚೇತನನಲ್ಲಿ ಉಪಾಧಿಸಂಬಂಧ ದೆಸೆಯಿಂದ ಜೀವಾತ್ಮಾ, ಪರಮಾತ್ಮಾ ಎಂದೂ ಪ್ರಪಂಚದಲ್ಲಿ ಚೇತನ = ಅಚೇತನ (ಜಡ) ಎಂದೂ ಭೇದವು ತೋರಿಕೊಂಡಿರುವುದು. ಆದರೆ ಈ ಭೇದವು ಸತ್ಯವಾದುದಲ್ಲ, ಏಕೆಂದರೆ ಆಯಾಯಾ ಉಪಾಧಿಯನ್ನು (ನಾಮರೂಪಗಳನ್ನು) ಪೃಥಕ್ಕರಿಸಿ, ಕಳೆದುಬಿಟ್ಟರೆ ಅಂದರೆ ದೇಹಾದಿ ಜಗತ್ ನಾಮರೂಪಗಳೆಲ್ಲವೂ ಮಾಯಿಕ = ಮಿಥ್ಯಾ ಎಂಬುದನ್ನು ವಿಚಾರಪೂರ್ವಕವಾಗಿ ತಿಳಿದು ನಿಶ್ಚಯಮಾಡಿಕೊಂಡು ಅನುಭವಕ್ಕೆ ತಂದುಕೊಂಡಾಗ (ಅಪವಾದ ಪ್ರಕ್ರಿಯೆಯಿಂದ) ಚೈತನ್ಯಮಾತ್ರವೇ ಕೇವಲವಾಗಿ = ಶುದ್ಧವಾಗಿ ಉಳಿದುಕೊಳ್ಳುತ್ತದೆ. ಆ ಚೈತನ್ಯವೇ ಆತ್ಮನು. ಆ ಶುದ್ಧ ವಸ್ತುವೇ ಬ್ರಹ್ಮವು. ಉಪಾಧಿಯು ಮಾಯೆಯಿಂದ ಆದ ಕಾರ್ಯವಾಗಿರುತ್ತದೆ ಅದು ಮಿಥ್ಯಾ ಎಂದು ನಿಶ್ಚಯ ಮಾಡಿಕೊಳ್ಳಬೇಕು.

ಇಲ್ಲಿ ಒಂದು ಸಂದೇಹ – ನಾಮ ರೂಪ ವಿಶೇಷ ಏನೂ ಇಲ್ಲದ ಅದ್ವಿತೀಯ ಬ್ರಹ್ಮ= ಆತ್ಮನಿಗೆ ಉಪಾಧಿ ಎಂಬ ಬೇರೆ ವಸ್ತುವು ಮತ್ತು ಆ ಸಂಬಂಧವು ವಿಶೇಷವು ಎಲ್ಲಿಂದ ಹೇಗೆ ಬರುವುದು? ಆ ಉಪಾಧಿ ಎಂದರೇನು? ಎಂದರೆ – ಆ ವಿವರಣೆ –

ವಸ್ತುವು ಸತ್ಯವಾಗಿ ಒಂದೇ ಇದ್ದರೂ ಅದರ ನೆರಳು ಅಥವಾ ಪ್ರತಿಬಿಂಬ ಎಂಬ ರೂಪಾಂತರಗಳು ಸಂಭವಿಸಬಹುದಲ್ಲವೇ ! ಇದು ಲೋಕದಲ್ಲಿ ಕಂಡಿದೆಯಲ್ಲವೇ ! ಅನೇಕ ಜಲಾಧಾರಗಳಲ್ಲಿ ಒಬ್ಬ ಸೂರ್ಯನದೇ ಅನೇಕ ಪ್ರತಿಬಿಂಬಗಳು ತೋರುತ್ತವೆ. ಆಕಾಶಕಾರ್ಯವಾದ ಘಟ ಮಠಗಳಲ್ಲಿ ಬೇರೆ ಬೇರೆ ಘಟಾಕಾಶಗಳು ಮಠಾಕಾಶಗಳು ಎಂಬ ಪ್ರತಿರೂಪಗಳು ಉಂಟಾಗುತ್ತವೆಯಲ್ಲವೇ? ಪ್ರಕಾಶವೆಂಬ ಒಂದೇ ಶುದ್ಧ ವಸ್ತುವು ರೂಪ, ಬಣ್ಣ ಮತ್ತು ಆಕಾರಗಳನ್ನು ಪ್ರಕಾಶಪಡಿಸುವಾಗ ಆ ಪ್ರಕಾಶವೇ ಆಯಾಯಾ ರೂಪಗೊಂಡಂತೆ ಆಗುವುದಷ್ಟೆ! ಅನೇಕ ಕನ್ನಡಿಗಳಲ್ಲಿ ಒಬ್ಬ ವ್ಯಕ್ತಿಯ ಅನೇಕ ಪ್ರತಿಬಿಂಬಗಳು ತೋರುವುವಷ್ಟೆ. ಈ ದೃಷ್ಟಾಂತಗಳನ್ನು ನಿದರ್ಶನವಾಗಿ ಕಾಣಬೇಕು. ಉಪಾಧಿ ಎಂದರೆ ಅತೀಂದ್ರಿಯ - ಸೂಕ್ಷ್ಮವಾದ ವಸ್ತುವನ್ನು ಕಂಡುಹಿಡಿಯಬಹುದಾದ ಸ್ಥಳ = ಅಧಿಷ್ಠಾನಕ್ಕೆ ಹೆಸರು. ಆ ಉಪಾಧಿಯ ಸ್ವಭಾವವೇನೆಂದರೆ ತನ್ನಲ್ಲಿ ಗೂಢವಾಗಿರುವ ವಸ್ತುವನ್ನು ತನ್ನ ಗುಣಧರ್ಮವುಳ್ಳದ್ದಾಗಿರುವಂತೆ ತೋರ್ಪಡಿಸುವುದು. ಈಗ ಇಲ್ಲಿ ಮನುಷ್ಯನಿಗೆ ದೇಹ ಇರುವುದು ಅನುಭವವಷ್ಟೆ. ಜೀವಾತ್ಮರ ಕರ್ಮಶೇಷದಿಂದ ಅವರಿಗೆ ದೇಹಪ್ರಾಪ್ತಿಯಾಗಿರುವುದು. ಈ ದೇಹವು ಆತ್ಮನಿಗೆ ಉಪಾಧಿಯಾಗಿದೆ. ದೇಹವು ತನ್ನ ಹುಟ್ಟು-ಸಾವು ಮುಂತಾದ ಧರ್ಮಗಳನ್ನು ಆತ್ಮನಲ್ಲಿ ಇರುವಂತೆ ತೋರ್ಪಡಿಸುವುದು. ಆದ್ದರಿಂದ ಆತ್ಮ-ಅನಾತ್ಮ ಇವರನ್ನು ವಿವೇಚಿಸಿಕೊಳ್ಳುವುದು ಸುಗಮವಾಗಿರುವುದಿಲ್ಲ. ವಿವೇಚನೆ ಮಾಡಿಕೊಂಡಾಗಲೇ ತಿಳಿಯುವುದು. ಕಾದಿರುವ ನೀರಿನಲ್ಲಿ ಸುಡುವುದು ಬೆಂಕಿ ಎಂದು ಹುಡುಗರಿಗೆ ತಿಳಿಯುವುದಿಲ್ಲ. ಇಂತಿರುವುದು ಉಪಾಧಿಯು. ದೇಹದಲ್ಲಿಯೇ ಬ್ರಹ್ಮವೇ ಆಗಿರುವ ಆತ್ಮನನ್ನು ಹುಡುಕಿ ಕಂಡುಕೊಳ್ಳಬೇಕು. ಬೇರೆಕಡೆ ಅವನು ಸಿಕ್ಕುವುದಿಲ್ಲ. ದೇಹವು ಆತ್ಮನಿಗೆ ಉಪಾಧಿಯಾಗಿರುತ್ತದೆ.

ಪ್ರಕೃತ - ಏಕಾದ್ವಿತೀಯ ಬ್ರಹ್ಮಾತ್ಮನಲ್ಲಿ ಉಪಾಧಿ ಎಂಬ ಬೇರೆ ವಸ್ತುವು ಸಂಭವಿಸುವುದು ಹೇಗೆಂದರೆ - ಆತ್ಮನ ಪ್ರಕೃತಿಯೇ ಅವನ ಸ್ವಭಾವವೇ ಅವನಲ್ಲಿ ಉಪಾಧಿಯಾಗಿ ವರ್ತಿಸಿಕೊಂಡಿರುವುದು. ಬ್ರಹ್ಮ ಆತ್ಮನು ಚೈತನ್ಯಪೂರ್ಣನೂ ಸರ್ವಶಕ್ತನೂ ಆಗಿರುತ್ತಾನಲ್ಲವೇ? ದೇಹೇಂದ್ರಿಯಾದಿ ಪ್ರಪಂಚ ಸೃಷ್ಟಿ ಮಾಡಿರುವುದರಿಂದಲೇ ಈಶ್ವರನ ಸರ್ವಜ್ಞತ್ವ ಸರ್ವಶಕ್ತತ್ವ ಮುಂತಾದ ಶಕ್ತಿ ಇರುವುದಕ್ಕೆ ಪ್ರಮಾಣ ಸಾಕ್ಷಿಯಾಗಿದೆ. ಅಂದಾಗ ಚೇತನನ ಪ್ರಕೃತಿಯಾದ ಚೈತನ್ಯವೇ = ಶಕ್ತಿಯೇ (ಸ್ವಭಾವವೇ) ಅವನಿಗೆ ಉಪಾಧಿಯಾಗಿರುವುದು. ಪ್ರತಿಯೊಂದು ವಸ್ತುವಿನಲ್ಲಿಯೂ ಅದರದರ ಶಕ್ತಿಯು ಇದ್ದೇ ಇರುವುದಷ್ಟೆ. ಇದು ಪ್ರಕೃತಿ ನಿಯಮ. ಈ ವಿಷಯಕ್ಕೆ ಆಕ್ಷೇಪ ಸಂಭವಿಸಲಾರದು. ಆದ್ದರಿಂದ ಆತ್ಮಶಕ್ತಿಯೇ

ಆತ್ಮನಿಗೆ ಉಪಾಧಿಯಾಗಿರುವುದು ಎಂದು ತಿಳಿಯಬೇಕು. ಶಕ್ತಿ ಎಂದರೆ ಕಾರ್ಯದ ಪೂರ್ವರೂಪವೆಂದೂ ಅದನ್ನೇ ಕಾರಣವಸ್ತು ಎಂದೂ ತಿಳಿಯಬೇಕು. ಶಕ್ತಿಯು ಕಾರಣವಾಗಿರುವುದರಿಂದಲೇ ಕಾರ್ಯೋತ್ಪತ್ತಿ ಮಾಡುವುದಾಗಿರುವುದು. (ಕೇವಲ ಆತ್ಮ ಚೇತನನು ಕಾರಣರೂಪನೂ ಅಲ್ಲ ಕಾರ್ಯರೂಪನೂ ಅಲ್ಲ ಸದಸತ್ಪರ = ಆತ್ಮಾ) ಈ ಶಕ್ತಿ ಎಂಬುದು ಆತ್ಮವಸ್ತುವಿಗಿಂತ ಬೇರೆ ಪೃಥಗ್ ಸ್ವತಂತ್ರ ವಸ್ತು ಆಗಿರುವುದಿಲ್ಲ. ಅದು ಆತ್ಮನಿಗೆ ಅನನ್ಯವೇ ಸ್ವಭಾವವೇ ಆಗಿರುತ್ತದೆ. ಈ ಮೂಲ ಪ್ರಕೃತಿಯೆಂಬ ಶಕ್ತಿಯನ್ನೇ ಆತ್ಮಮಾಯೆ-ಮಾಯಾಶಕ್ತಿ ಎಂದು ತಿಳಿಸಿಕೊಟ್ಟಿರುತ್ತಾರೆ. ಈ ಶಕ್ತಿ ಎಂಬ ಮೂಲಕಾರಣವಸ್ತುವು ತ್ರಿಗುಣಾತ್ಮಕವಾಗಿರುವುದರಿಂದಲೇ, ಪರಿಣಾಮ ಸ್ವಭಾವದ್ದಾದ್ದರಿಂದಲೇ ಕಾರ್ಯೋದ್ಭವಮಾಡುವುದಾಗಿರುವುದು. ಅಂದಾಗ ಈ ಮಾಯಾಶಕ್ತಿ ಎಂಬ ಪ್ರಕೃತಿಯು ಅವ್ಯಕ್ತವಾಗಿ ಕಾರಣರೂಪದಿಂದಲೂ, ವ್ಯಕ್ತವಾಗಿ ಕಾರ್ಯರೂಪದಿಂದಲೂ ಆತ್ಮನಿಗೆ ಉಪಾಧಿಯಾಗಿ ಸಂಬಂಧಿಸಿಕೊಂಡಿರುವುದು. ಅವ್ಯಕ್ತಮಾಯೆ ಎಂಬ ಸಮಷ್ಟಿ ಕಾರಣೋಪಾಧಿಯುಳ್ಳ ಚೈತನ್ಯವೇ ಈಶ್ವರನು = ಪರಮಾತ್ಮನು. ಕಾರ್ಯೋಪಾಧಿ ಅಂದರೆ ಮಾಯಾಅವಿದ್ಯಾಕಾರ್ಯವಾದ ವ್ಯಷ್ಟಿ (ದೇಹ) ವ್ಯಕ್ತ ಪಂಚಕೋಶ ಉಪಾಧಿಯುಳ್ಳ ಚೈತನ್ಯವೇ ಜೀವಾತ್ಮನು. ಈ ಉಪಾಧಿಸಂಬಂಧವು ಜೀವಾತ್ಮನಿಂದಲೇ ಕಲ್ಪಿತವಾಗಿರುವುದೆಂಬುದನ್ನು ಹಾಗೂ ಇದೇ ಆರೋಪಾಧ್ಯಾಸ ಎಂದೂ ಗೊತ್ತುಮಾಡಿಕೊಳ್ಳಬೇಕು. ಹೀಗೆ ಉಪಹಿತನಾಗಿರುವಾಗ ಬ್ರಹ್ಮದೇವನೇ ಆತ್ಮಾ ಎಂದಾದನು. ಬ್ರಹ್ಮ = ಆತ್ಮನು ಒಬ್ಬನೇ. ಅವನನ್ನೇ ಪುರುಷ ಎನ್ನುತ್ತಾರೆ. (ಪುರಿ ಓಷತಿ ಪ್ರಕಾಶತೆ ದೀಪ್ಯತೇ ಇತಿ ಪುರುಷಃ ಅಂದರೆ ಅನೇಕ ಅಂಗಗಳುಳ್ಳ ಪಟ್ಟಣದಂತಹ ದೇಹದಲ್ಲಿ ನಾನು ನಾನು ಎಂದು ಜ್ಞಾನರೂಪದಿಂದ ಪ್ರಕಾಶಿಸುತ್ತಾನೆ ಎಂದರ್ಥ) ಈ ಏಕ ಆತ್ಮನೇ ಸಮಸ್ತ ಸ್ತ್ರೀ ಮತ್ತು ಪುರುಷ ಪ್ರಾಣಿಗಳಲ್ಲಿ ಅಂತರ್ಯಾಮಿಯಾಗಿದ್ದಾನೆ. ಈ ಮಾಯೆಯನ್ನೇ ಪ್ರಕೃತಿ ಎನ್ನುತ್ತಾರೆ. ಹೀಗೆ ಪ್ರಕೃತಿ-ಪುರುಷ ಎಂಬ ತತ್ತ್ವವಿವೇಕವಿಚಾರವಿರುತ್ತದೆ. ಈ ಪ್ರಕೃತಿಪುರುಷರ ಸಂಯೋಗದಿಂದಲೇ ಅಭೇದಾಧ್ಯಾಸದಿಂದಲೇ ಈ ಪ್ರಪಂಚವಿಸ್ತಾರವು ಉಂಟಾಗಿರುತ್ತದೆ. ಹೀಗೆ ತತ್ತ್ವವಿಚಾರ ವಿವೇಕದಿಂದ ಏಕಚೈತನ್ಯ ವಸ್ತುವೇ ಆತ್ಮಚೇತನ ಎಂದೂ ಆ ನಿಜ ಆತ್ಮನೇ ಪರಬ್ರಹ್ಮ ಎಂದೂ ಅರಿತುಕೊಳ್ಳಬೇಕು. ಈ ಆತ್ಮದೇವನು ನಿತ್ಯ ಶುದ್ಧ ಬುದ್ಧ ಮುಕ್ತ ಪರಬ್ರಹ್ಮನೇ ಎಂದರಿಯಬೇಕು.

★★★

## ಪರಮಾತ್ಮಾ - ಜೀವಾತ್ಮಾ ಈ ಭೇದಕಥೆ

ಅಖಂಡೈಕ ಬ್ರಹ್ಮಚೈತನ್ಯವೇ ಉಪಹಿತನಾಗಿ ಮನುಷ್ಯಾದಿ ನಾನಾ ಪ್ರಾಣಿಗಳಲ್ಲಿ ಬಿಡಿಬಿಡಿಯಾಗಿ ಜೀವ ಆತ್ಮಾ ಎಂದು ತೋರಿಕೊಂಡಿರುವನು. ಇದು ಹೇಗಾಗಿದೆ ಎಂಬುದನ್ನು ಆಕಾಶದ ದೃಷ್ಟಾಂತದಿಂದಲೂ ಮತ್ತು ಪ್ರತಿಬಿಂಬ = ಪ್ರತಿರೂಪದ ದೃಷ್ಟಾಂತದಿಂದಲೂ ಮನಗಾಣಬಹುದಾಗಿದೆ. ಆಕಾಶವು ಸರ್ವತ್ರ ವ್ಯಾಪ್ತವಾಗಿದ್ದು ಒಂದೇ ಆಗಿರುವುದಷ್ಟೆ! ಆದರೂ ಪ್ರಪಂಚದಲ್ಲಿ ಉಪಾಧಿನಿಮಿತ್ತದಿಂದ ಘಟಾಕಾಶಗಳು, ಮಠಾಕಾಶಗಳು, ಮಹಾಕಾಶ ಎಂಬೀರೀತಿ ಭೇದವು ವ್ಯವಹಾರವು ಉಂಟಾಗಿರುವುದು. ಸೂರ್ಯಮಂಡಲವು ಒಂದೇ ಇದ್ದರೂ ಬೇರೆಬೇರೆ ಜಲಾಧಾರಗಳಲ್ಲಿ = ಉಪಾಧಿಗಳಲ್ಲಿ ಬೇರೆಬೇರೆ ಸೂರ್ಯನ ಪ್ರತಿರೂಪಗಳು = ಪ್ರತಿಬಿಂಬಗಳು ಕಾಣುವುವು. ಆದರೆ ಒಂದೇ ಸೂರ್ಯಮಂಡಲವಿರುವುದು. ಆಕಾಶವು ಒಂದೇ ಇರುವುದು. ನಿರ್ಮಲವಾದ ಒಂದೇ ಬೆಳಕಿನಿಂದ ಕೆಂಪು ಹಳದಿ ಹಸಿರು ಮುಂತಾದ ಅನೇಕ ರೂಪಗಳು ತೋರುವುವು.

ಒಂದು ಹೊಸಘಟವೋ, ಒಂದು ಮಠವೋ ನಿರ್ಮಾಣಗೊಂಡಾಗ ಆಗಿಂದಾಗಲೇ ಆ ಘಟದಲ್ಲಿ, ಮಠದಲ್ಲಿ ಆಕಾಶವು ತುಂಬಿಕೊಂಡುಬಿಡುವುದು. ಆಗಲೇ ಅವುಗಳಲ್ಲಿ ಪ್ರತ್ಯೇಕ ಪ್ರತ್ಯೇಕವಾಗಿ ಸ್ಥಳಾವಕಾಶವು ಏರ್ಪಟ್ಟುಕೊಳ್ಳುವುದು. ಹೀಗಾದಾಗ ಘಟವೂ ಮಠವೂ ಆಕಾಶಕ್ಕೆ ಉಪಾಧಿಯಾಗಿ ವರ್ತಿಸಿಕೊಂಡಿದ್ದು, ಅಖಂಡವಾಗಿರುವ ಆಕಾಶವನ್ನು ಪರಿಚ್ಛಿನ್ನಗೊಳಿಸಿದಂತೆ ತುಂಡುತುಂಡು ಮಾಡಿದಂತೆ ಆಗುವುದು. ಹಾಗೆ ತೋರುವುದು. ಆದರೆ ಆಕಾಶವು ವಸ್ತುತಃ ತುಂಡಾಗಿರುವುದಿಲ್ಲ, ಆದಾಗ್ಯೂ ಬೇರೆಬೇರೆ ಅಳತೆ, ತೂಕ, ಅಂಕೆ, ಆಕಾರ, ಕ್ಲಪ್ತವಾದ ಸ್ಥಳ ಇವು ಏರ್ಪಟ್ಟುಕೊಳ್ಳುವುದಷ್ಟೆ! ಹೀಗಾಗುವುದು ಆ ಉಪಾಧಿ ಸಂಬಂಧದಿಂದಲೇ ಎನ್ನುವುದು ನಿಜ. ಆಕಾಶವು ಏಕವಾಗಿರುವುದೂ ನಿಜವೇ.

ಉಪಾಧಿ ಎಂದರೆ ಇಂದ್ರಿಯಗಳಿಗೆ ಗೋಚರವಾಗದೇ ಇರುವ ಸೂಕ್ಷ್ಮವಸ್ತುವನ್ನು ಕಂಡುಹಿಡಿಯಲು (ಉಪಲಬ್ಧ್ಯಧಿಷ್ಠಾನ) ಆವಶ್ಯಕವಾದ ಸ್ಥಳಾವಕಾಶ ದ್ವಾರ-ಉಪಾಯಕ್ಕೆ ಉಪಾಧಿ ಎನ್ನುತ್ತಾರೆ. ಈ ಉಪಾಧಿಯ ಸ್ವಭಾವವೇನೆಂದರೆ – ತನ್ನಲ್ಲಿ ಗೂಢವಾಗಿರುವ ವಸ್ತುವನ್ನು ತನ್ನ ಗುಣ ಧರ್ಮವುಳ್ಳದ್ದಾಗಿರುವಂತೆ ತೋರ್ಪಡಿಸುತ್ತಿರುವುದು. ಅಜ್ಞಾನಿಗಳು ಅವೆಲ್ಲಾ ನಿಜ ಎಂದೇ ನಂಬಿಕೊಳ್ಳುವರು. ವಾಸ್ತವದಲ್ಲಿ ಅದರ ಧರ್ಮಗಳು ಆ ಸೂಕ್ಷ್ಮವಸ್ತುವಿನಲ್ಲಿ ಇರುವುದಿಲ್ಲ, ಆ ಉಪಾಧಿವಸ್ತುವನ್ನು ದ್ವಾರಮಾಡಿಕೊಳ್ಳದೆ ಅದರಲ್ಲಿ ಗೂಢವಾದ ವಸ್ತುವನ್ನು ಕಂಡುಹಿಡಿಯಲಾಗುವುದಿಲ್ಲ. ಮನುಷ್ಯಾದಿ ಪ್ರಾಣಿಗಳಿಗೆ

ಸ್ವಪೂರ್ವ ಕರ್ಮದಿಂದ ಉಂಟಾಗಿರುವ ದೇಹವು ಉಪಾಧಿಯಾಗಿರುವುದು. ದೇಹದಲ್ಲಿಯೇ ಗೂಢವಾಗಿರುವ (ಅತೀಂದ್ರಿಯ) ಆತ್ಮನನ್ನು ಹುಡುಕಿ ಕಂಡುಹಿಡಿಯಬೇಕು. ಬೇರೆಕಡೆ ಅವನು ಸಿಕ್ಕುವುದಿಲ್ಲ. ಮುಪ್ಪು, ಮರಣ, ಜನ್ಮಮುಂತಾದ ದೇಹಧರ್ಮಗಳು ಆತ್ಮನಿಗೆ ಸೇರಿರುವುದಿಲ್ಲ. ಆತ್ಮನು = ಕೇವಲ ನಿತ್ಯ ಸಾಕ್ಷೀ ಚೈತನ್ಯ. ಅವನು ಆಕಾಶದಂತೆ ಸದಾ ಅಸಂಗ. ಶುದ್ಧನೇ ಇರುತ್ತಾನೆ. ಉಪಾಧಿವಸ್ತುವು (ದೇಹವು) ಪರಿಣಾಮಸ್ವಭಾವದ ಮಾಯಾ ಶಕ್ತಿಯ ಕಾರ್ಯ. ಅದು ಜಡ ಹಾಗೂ ಮಿಥ್ಯೆ ಆಗಿರುತ್ತದೆ.

ಘಟಗಳು ಹುಟ್ಟುವಾಗ ಅವುಗಳಲ್ಲಿ ಆಕಾಶವು ತುಂಬಿಕೊಳ್ಳುವಂತೆ ಮನುಷ್ಯಾದಿ ಪ್ರಾಣಿಗಳ ಕರ್ಮಾನುಗುಣವಾಗಿ ಶರೀರಗಳು ಹುಟ್ಟುವಾಗ, ಗರ್ಭವು ಉದಯವಾಗುವಾಗಲೇ ಆ ಗರ್ಭಪಿಂಡದಲ್ಲಿ ಚೈತನ್ಯವು ಅಂದರೆ ಸರ್ವವ್ಯಾಪ್ತನಾದ ಚಿಚ್ಛಕ್ತಿರೂಪದ ಆತ್ಮ ಚೇತನನು ತುಂಬಿಕೊಳ್ಳುವನು. ಹಾಗೂ ಅಂತಃಕರಣದಲ್ಲಿ ಪ್ರತಿಬಿಂಬಿಸುವನು. ಆದ್ದರಿಂದಲೇ ಪರಮಾತ್ಮನನ್ನು ಪುರುಷ ಎನ್ನುತ್ತಾರೆ. (ಪಟ್ಟಣದಂತಿರುವ ದೇಹದಲ್ಲಿ ನೆಲೆಸಿ ನಾನು ನಾನು ಎಂದು ಪ್ರಕಾಶಿಸುವವನು ಎಂದರ್ಥ). ವಾಸ್ತವದಲ್ಲಿ ಶರೀರಕ್ಕೂ ಆತ್ಮನಿಗೂ ಸಂಬಂಧವೇನೂ ಉಂಟಾಗಿರುವುದಿಲ್ಲ. ಕನ್ನಡಿಗೂ ಅದರಲ್ಲಿ ತೋರುವ ಪ್ರತಿಬಿಂಬಕ್ಕೂ ಮತ್ತು ಬಿಂಬ = ಮುಖಕ್ಕೂ ವಾಸ್ತವವಾಗಿ ಸಂಬಂಧ ಉಂಟಾಗಿರುವುದಿಲ್ಲ. ಆದರೆ ನೋಡುವವನಿಗೆ ಸಂಬಂಧವಿರುವಂತೆ ಭಾವನೆಯುಂಟಾಗುವುದು. (ಇದು ಭ್ರಾಂತಿ) (ಈ ಉಪಾಧಿ ಸಂಬಂಧವು ಜೀವಕಲ್ಪಿತ) ಆದರೂ ಜ್ಯೋತಿಃಸ್ವರೂಪದ ಆತ್ಮನ ಪ್ರತಿಬಿಂಬವು ಅಂತಃಕರಣದಲ್ಲಿ ಪ್ರತಿಫಲಿಸಿರುವುದು. ಸ್ಥೂಲ ಸೂಕ್ಷ್ಮ ಶರೀರವು ತ್ರಿಗುಣಾತ್ಮಕವಾದುದು. ಆ ಸತ್ತ್ವಗುಣದಲ್ಲಿ ಶಕ್ತಿರೂಪದ ಚೈತನ್ಯನ ಪ್ರತಿಬಿಂಬ ಗ್ರಹಿಸುವ ಶಕ್ತಿ ಇರುವುದು. ಮನುಷ್ಯನ ಅಂತಃಕರಣದಲ್ಲಿ ಜ್ಞಾನ ಪ್ರಕಾಶ ಶಕ್ತಿ ಸ್ವರೂಪದ ಚೇತನಾತ್ಮನ ಪ್ರತಿಬಿಂಬವು ಒಡಮೂಡುವುದು. ಕನ್ನಡಿಯಲ್ಲಿ ಬೆಳಕಿನ ಪ್ರತಿಬಿಂಬವಾದಾಗ ಆ ಪ್ರತಿಬಿಂಬವೂ ಬೆಳಕಿನಂತೆ ಪ್ರಕಾಶರೂಪವೇ ಆಗಿರುವುದಷ್ಟೆ! ಹೀಗೆ ಅಂತಃಕರಣದಲ್ಲಿ ಪ್ರತಿಬಿಂಬಿತನಾದ ಜೀವಾತ್ಮನೂ ಪ್ರಕಾಶರೂಪನೇ ಆಗಿರುತ್ತಾನೆ. ಈ ಪ್ರತಿಬಿಂಬವೂ ಜ್ಯೋತಿಃಸ್ವರೂಪ ಸ್ವಭಾವದ್ದೇ ಆಗಿರುವುದರಿಂದ ಮತ್ತು ಅದರಲ್ಲಿಯೂ ಆತ್ಮ ಚೇತನನು ತುಂಬಿರುವುದರಿಂದ ಅದೂ ಜ್ಯೋತಿರ್ವಸ್ತುವಿನಂತೆ = ಚೇತನನಂತೆ ವರ್ತಿಸಿಕೊಂಡಿರುವುದು. ಅಂದರೆ ಆತ್ಮಬಿಂಬದೊಂದಿಗಿರುವ ಈ ಆತ್ಮಪ್ರತಿಬಿಂಬವು ಆಯಾಯಾ ಶರೀರದ ಪ್ರಾಣೇಂದ್ರಿಯಾದಿಗಳನ್ನು ಹಿಡಿದಿಟ್ಟುಕೊಂಡಿರುವುದು. (ಬಿಂಬ ವಸ್ತು ಇಲ್ಲದೇ ಪ್ರತಿಬಿಂಬವು ಇರುವುದಿಲ್ಲವಷ್ಟೆ) ಹೀಗೆ ಬಿಂಬ ಪ್ರತಿಬಿಂಬ ಭಾವದಿಂದಿರುವ

ಚೈತನ್ಯಕ್ಕೆ ಜೀವಾತ್ಮಾ ಎಂಬ ಹೊಸ ಸ್ವಭಾವ, ಸ್ವರೂಪ, ಹೊಸ ಸಂಜ್ಞೆ ಉಂಟಾಗಿರುತ್ತದೆ. ಈ ಸ್ವರೂಪವೂ ಸ್ವಭಾವವೂ ಉಪಾಧಿಸಂಬಂಧವೂ ಕಲ್ಪನೆಯ (ಭ್ರಮೆ) ದೆಸೆಯಿಂದಲೇ ಉಂಟಾಗಿರುವುದೆಂದು ತಿಳಿಯಬೇಕು. (ಸಾಧಿಷ್ಠಾನಶ್ಚಿದಾಭಾಸೋ ಜೀವಾತ್ಮೇತ್ಯಭಿಧೀಯತೇ) ಪ್ರತಿಬಿಂಬರೂಪದ ಈ ಜೀವಾತ್ಮನು ವಿಕಾರಿಯಾಗಿರುವಂತೆ ಕಂಡರೂ ಬಿಂಬರೂಪದ ಪ್ರತ್ಯಗಾತ್ಮನು ವಿಕಾರಿಯಾಗಿರುವುದಿಲ್ಲ. ಅವನು ದೃಗ್‌ರೂಪ ಕೂಟಸ್ಥ ಸಾಕ್ಷಿಯೇ, ಸದಾ ಶುದ್ಧನೇ. (ಪ್ರತಿಬಿಂಬ ರೂಪದ ಜೀವಾತ್ಮನು ಅವಸ್ತುವೆ) ಪ್ರಾಣಿಗಳ ಶರೀರದಲ್ಲಿ ನಿಜ ಆತ್ಮನು ಬಿಂಬ ಪ್ರತಿಬಿಂಬಭಾವದೊಡನೆ ನೆಲೆಸಿರುವಾಗ, ಪ್ರಾಣೇಂದ್ರಿಯಗಳನ್ನೂ ಹಿಡಿದಿಟ್ಟುಕೊಂಡಿರುವಾಗ, ಆ ಬಿಂಬ ಪ್ರತಿಬಿಂಬ ಚೈತನ್ಯಜ್ಯೋತಿಗಳಲ್ಲಿ ಭೇದ ತೋರುವುದಿಲ್ಲ. ಭೇದಗ್ರಹಣೆಯಾಗದಿರುವುದರಿಂದಲೇ ಬಿಂಬದೊಂದಿಗೆ ಚಿದಾಭಾಸ = ಜೀವಾತ್ಮನಿಗೆ ಅಭೇದಗ್ರಹಣೆಯಾಗುವುದು. ಹೀಗೆ ಸ್ವಾಭಾವಿಕವಾಗಿ ಆತ್ಮ ಅನಾತ್ಮರಿಗೆ ಅನ್ಯೋನ್ಯ ಆರೋಪ ಅಧ್ಯಾಸವಾಗುವುದು. ಅಂದರೆ ಪ್ರಾಣಿಗಳ ಅಂತಃಕರಣಕ್ಕೂ ಬಿಂಬರೂಪದ ಆತ್ಮನಿಗೂ ಭೇದ ತೋರದೇ ಅಭೇದವೇ ತೋರುವುದು. ಆದ್ದರಿಂದಲೇ ದೇಹವೇ ನಾನು ಎಂದು ತೋರುತ್ತಿದೆ. ಇದೇ ಅವಿವೇಕವು. ಇದನ್ನೇ ಅವಿದ್ಯಾಗ್ರಂಥಿ ಎನ್ನುತ್ತಾರೆ. ಇದರಿಂದ ನಿಜ ಆತ್ಮನಿಗೂ ವಿಕಾರ = ಪರಿಣಾಮವುಂಟಾದಂತೆ ಮನುಷ್ಯನಿಗೆ ಭ್ರಾಂತಿ ಆಗುವುದು. ವಸ್ತುತಃ ಪ್ರತ್ಯಗಾತ್ಮನಿಗೆ ಪರಿಣಾಮವುಂಟಾಗಿರುವುದಿಲ್ಲ. ಏಕೆಂದರೆ ಆತ್ಮನು ಆಕಾಶದಂತೆ ಯಾವಾಗಲೂ ಅಸಂಗನೇ ಇರುತ್ತಾನೆ. ದೃಗ್ ರೂಪ ಸಾಕ್ಷಿಮಾತ್ರ ಆಗಿರುತ್ತಾನೆ. ಅಲ್ಲದೇ ಶರೀರಾದಿಗಳು ಮಾಯಾಕಾರ್ಯವಾಗಿರುತ್ತವೆ. ಅಂದರೆ ಅವು ಮಿಥ್ಯಾ = ಹುಸಿಯಾಗಿರುತ್ತವೆ. ಅಂದಾಗ ಆತ್ಮಾ ಅನಾತ್ಮರಿಗೆ ಸಂಬಂಧ ಉಂಟಾಗಿರುವುದೇ ಇಲ್ಲ. ಸಂಬಂಧವಿರುವುದೆಂಬುದು ಅವಿದ್ಯಾಮಾಯಾವಶನಾಗಿ ಜನ್ಮಪಡೆದಿರುವ ಪ್ರೇಕ್ಷಕ ಪ್ರಮಾತೃವಿನ = ಮನುಷ್ಯನ ಭ್ರಾಂತಿಮಾತ್ರವೇ ಆಗಿರುತ್ತದೆ. ಹೀಗೆ ಭ್ರಾಂತಿಯಿಂದಿರುವ ಜೀವರು ಸ್ವಸ್ವಕರ್ಮಾನುಗುಣವಾಗಿ ಪುನಃಪುನಃ ಜನ್ಮಮರಣಗಳನ್ನು ಪಡೆಯುವರು. ಸಂಸಾರಿಗಳು ಆಗಿರುತ್ತಾರೆ. (ತತ್ತ್ವಜ್ಞಾನಾಗ್ನಿಯಿಂದ ಕರ್ಮಗಳನ್ನು ಭಸ್ಮ ಮಾಡಿಕೊಂಡವರು ಮುಕ್ತರಾಗುವರು.)

ಆಕಾಶಕ್ಕೆ ಘಟ ಮಠಗಳ ಉಪಾಧಿಸಂಬಂಧ ಇದ್ದಾಗಲೂ, ಆ ಸಂಬಂಧ ತಪ್ಪಿಹೋದಾಗಲೂ ಆಕಾಶದಲ್ಲಿ ಯಾವ ವಿಕಾರ-ವ್ಯತ್ಯಾಸವೂ ಉಂಟಾಗುವುದಿಲ್ಲವಷ್ಟೆ! ಹಾಗೆಯೇ ಶರೀರ ಪ್ರಾಣಾದಿಗಳ ಸಂಬಂಧ ಇರುವಂತೆ ತೋರಿದಾಗ ಅಥವಾ ಸಂಬಂಧ

ತಪ್ಪಿಹೋದಾಗ ಆತ್ಮನಲ್ಲಿ ವ್ಯತ್ಯಾಸ- ವಿಕಾರವೇನೂ ಸಂಭವಿಸುವುದಿಲ್ಲ. ಮತ್ತು ನಿಜ ಆತ್ಮನು ಬಿಂಬರೂಪದಲ್ಲೇ (ಸಾಕ್ಷೀರೂಪ) ಇರುವುದರಿಂದ ಶರೀರ ಪ್ರಾಣಾದಿಗಳ ಗುಣಧರ್ಮಗಳು ನಿಜ ಆತ್ಮನಿಗೆ ಸೇರಿರುವುದಿಲ್ಲ. ಆ ಚೈತನ್ಯಜ್ಯೋತಿಃಸ್ವಭಾವದ ಬಿಂಬರೂಪದ ನಿಜ ಪ್ರತ್ಯಗಾತ್ಮನೇ ಎಲ್ಲವನ್ನೂ ನಿಜವಾಗಿ ಅರಿಯುವವನಾಗಿರುತ್ತಾನೆ. ಜ್ಞಾನಸ್ವರೂಪನಾಗಿರುತ್ತಾನೆ. ಅವನೇ ಸರ್ವಜ್ಞನು. ಜಡಪ್ರಕೃತಿಯ ಕಾರ್ಯಗಳಾದ ಮನೋಬುದ್ಧಿಗಳು ಮತ್ತು ಪ್ರತಿಬಿಂಬರೂಪದ ಜೀವಾತ್ಮನು = ಚಿದಾಭಾಸವು ಏನನ್ನೂ ಅರಿಯಲಾರವು. ಆದ್ದರಿಂದ ಮನುಷ್ಯನು ನಾನು ಅರಿತೆ ಎಂದುಕೊಳ್ಳುವುದು ಕೇವಲ ಭ್ರಾಂತಿಯೇ, ಅಹಂಕಾರವೇ ಆಗಿರುತ್ತದೆ. ಪ್ರತಿಬಿಂಬರೂಪದ ಜೀವಾತ್ಮನು = ಚಿದಾಭಾಸನು ಏನನ್ನೂ ಅರಿಯುವುದಿಲ್ಲ. ಪ್ರತ್ಯಗಾತ್ಮನೇ ಅರಿಯುವವನು. ಆದರೂ ಅನ್ಯೋನ್ಯಾಧ್ಯಾಸ ದಿಂದಿರುವ ಚಿದಾಭಾಸಾದಿಗಳೆಲ್ಲವೂ ನಿಜ ಆತ್ಮನಿಗೆ ದೃಶ್ಯ ವಿಷಯಗಳೇ, ಜಡಪದಾರ್ಥಗಳೇ ಆಗಿರುತ್ತವೆ. ಬೆಂಕಿಯಿಂದ ಚೆನ್ನಾಗಿ ಕಾದಿರುವ ಲೋಹವು ಪ್ರಕಾಶಿಸುವುದು. ಕಾದನೀರು ಸುಡುವುದು. ಅಂದಾಗ ಅಲ್ಲಿ ನಿಜವಾಗಿ ಪ್ರಕಾಶಿಸುವುದು, ಸುಡುವುದು ಬೆಂಕಿಯೇ. ಹಾಗೆಯೇ ಪ್ರತ್ಯಗಾತ್ಮನೇ ತಿಳಿಯತಕ್ಕವನು. ಚೈತನ್ಯವ್ಯಾಪ್ತವಾದ ದೇಹೇಂದ್ರಿಯಾದಿಗಳು ಚೇತನನಂತೆ ವರ್ತಿಸಿಕೊಂಡಿರುತ್ತವೆ ಎಂದು ತಿಳಿಯಬೇಕು. ಆದ್ದರಿಂದ ಮನುಷ್ಯನಿಗೆ ಆರೋಪಾಧ್ಯಾಸವಿರುವುದರಿಂದಲೇ ದೇಹವೇ ನಾನು = ಚೇತನ ಎಂಬ ಭ್ರಾಂತಿ ಉಂಟಾಗಿರುವುದು. ಇದು ತಪ್ಪು ತಿಳಿವಳಿಕೆ. ಮಿಥ್ಯಾ ನಂಬಿಕೆಯೇ ಸರಿ. ಹೀಗೆಂಬ ತತ್ತ್ವವು ಆತ್ಮ- ಅನಾತ್ಮ ಅವರ ಸ್ವಭಾವ ಮತ್ತು ಸ್ವರೂಪಗಳನ್ನು ವಿಚಾರಮಾಡಿಕೊಂಡಾಗಲೇ ಈ ಭೇದ ತಿಳಿಯುವುದು. ಅನ್ಯಥಾ ತಿಳಿಯುವುದಿಲ್ಲ.



## ಜ್ಞಾನ ಎಂದರೇನು ? ಅದರ ಸ್ವರೂಪ ಮತ್ತು ಅದು ಉಂಟಾಗುವ ಕ್ರಮ

ಸತ್, ಚಿತ್, ಚಿಚ್ಛಕ್ತಿ, ಚೈತನ್ಯ, ಬ್ರಹ್ಮ, ಆತ್ಮಾ, ಕೂಟಸ್ಥಸಾಕ್ಷೀ ನಿತ್ಯಸತ್ಯಚೇತನ, ನಿಜವಾದ ಶುದ್ಧ ಜ್ಞಾನ, ಮತ್ತು ದಿವ್ಯಪ್ರಕಾಶ ಎಂಬಿವೆಲ್ಲಾ ಒಂದೇ ತತ್ತ್ವ, ಒಂದೇ ಅರ್ಥ ಎಂದು ತಿಳಿಯಬೇಕು. ಚೈತನ್ಯವು ವಸ್ತುವನ್ನು ಅರಿಯುವುದಾದ್ದರಿಂದಲೇ ಅನುಭವಿಸುವುದಾದ್ದರಿಂದಲೂ ಅದನ್ನು ಜ್ಞಾನ ಎನ್ನುತ್ತಾರೆ. ಅಂದಾಗ ಜ್ಞೇಯ ದೃಷ್ಟಿಯಿಂದ ಚೈತನ್ಯವೇ ಜ್ಞಾನ - ಪ್ರಕಾಶ ಎನ್ನುವುದಾಗಿದೆ ಮತ್ತು ಚೈತನ್ಯವು ಕಾರ್ಯವನ್ನುಂಟುಮಾಡುವುದರಿಂದ ಶಕ್ತಿ ಎನ್ನುವುದೂ ಆಗಿರುತ್ತದೆ.

ವಸ್ತುವನ್ನು ತಿಳಿಯಲು ಉದ್ದೇಶಿಸಿದ ಮನುಷ್ಯನ ಜ್ಞಾನೇಂದ್ರಿಯಗಳು

ಬಾಹ್ಯದಲ್ಲಿರುವ ವಸ್ತುವಿನೊಂದಿಗೆ ಸಂಬಂಧಿಸುವುವು. ಆ ಕ್ಷಣವಲ್ಲೇ ಆ ಇಂದ್ರಿಯಗಳೊಂದಿಗೆ ಸಂಬಂಧಪಟ್ಟುಕೊಂಡಿರುವ ಅವನ ಮನಸ್ಸಿನಲ್ಲಿ ಆ ವಿಷಯ ವಸ್ತುವಿನ ಪ್ರತಿಬಿಂಬ ಉಂಟಾಗುವುದು. (ಇಲ್ಲಿ ವಿಷಯ ಎಂದರೆ ಭೂಮಿ ಜಲಾದಿಗಳು ಮತ್ತು ಶಬ್ದ, ಸ್ಪರ್ಶ, ರೂಪ, ರಸ, ಗಂಧ ಎಂಬ ಐದು ವಿಷಯಗಳನ್ನೂ ಹಸಿವು, ಬಾಯಾರಿಕೆ, ಭಯ, ರೋಗ ಮತ್ತು ಸುಖ ದುಃಖ ಮೊದಲಾದ ಮನಸ್ಸಿನ ಭಾವವಿಶೇಷಗಳನ್ನೂ ವಿಷಯವೆಂದು ಗ್ರಹಿಸಬೇಕು. ಇವಕ್ಕೆ ರೂಪ ಇಲ್ಲದಿದ್ದರೂ ಶಬ್ದದ ಪ್ರತಿಧ್ವನಿಯಂತೆ ಪ್ರತಿರೂಪಗಳು ಸಂಭವಿಸುವುವು). ಅಂದರೆ ವಿಷಯಗಳ ಆಕಾರ ಸ್ವರೂಪವು ಕನ್ನಡಿಯಲ್ಲಿ ಪ್ರತಿಬಿಂಬವು ಹೇಗೋ ಹಾಗೆಯೇ (ಮನಸ್ಸಿನಲ್ಲಿ) ಒಡಮೂಡುವುದು = ಪ್ರತಿಬಿಂಬಿಸುವುದು. ಇದಕ್ಕೆ ಬುದ್ಧಿವೃತ್ತಿ ಎನ್ನುತ್ತಾರೆ. ಈ ವಿಷಯಾಕಾರವುಳ್ಳ ಬುದ್ಧಿವೃತ್ತಿಯನ್ನು ಆ ಕೂಡಲೇ ಚಿದಾಭಾಸ ರೂಪದ ಜೀವಾತ್ಮನು ಪ್ರಕಾಶಪಡಿಸುವನು. ಆಗ ವಿಷಯಾಕಾರವು ಹೊಳೆಯುವುದು. ಈ ರೀತಿ ಆಗುವ ವಸ್ತುಪ್ರಕಾಶವನ್ನೇ ಜ್ಞಾನ ಎಂದು ಹೇಳುವರು. ಇದಕ್ಕೆ ಪ್ರತ್ಯಯ ಎಂದೂ ಹೆಸರು. ಆದರೆ ಈ ಪ್ರತ್ಯಯರೂಪದ ಜ್ಞಾನವು ನಿಜವಾದ ಜ್ಞಾನವಲ್ಲ. ಅನುಭವ ರೂಪವೂ ಅಲ್ಲ. ಇದು ಕೇವಲ ಜ್ಞಾನದ ಆಭಾಸವಾಗಿರುವುದು. ಏಕೆಂದರೆ ಈ ಜೀವಾತ್ಮನು ನಿಜಾತ್ಮನ ಪ್ರತಿರೂಪ = ಪ್ರತಿಬಿಂಬ. ಅವನ ಚಿತ್‌ಪ್ರಕಾಶವೂ ಪ್ರತಿಬಿಂಬವೇ ಆಗಿದ್ದು ಆ ಬಗೆಯ ಪ್ರಕಾಶದಿಂದ ವಸ್ತುವು ಹೊಳೆದಿರುತ್ತದೆ. ಪ್ರತಿಬಿಂಬವು ಅವಸ್ತುವಾಗಿರುವುದರಿಂದ ಅಂತಹ ಪ್ರಕಾಶದಿಂದ ಹೊಳೆದುದೂ ಅವಸ್ತುವೇ ಆಗಿರುತ್ತದೆ. ಆದ್ದರಿಂದ ಜೀವಾತ್ಮಜ್ಯೋತಿಯಿಂದ ಹೊಳೆದ ಮನೋವೃತ್ತಿ ಪ್ರಕಾಶವು ಅಂದರೆ ಪ್ರತ್ಯಯರೂಪ ಜ್ಞಾನವು ಅವಸ್ತುರೂಪವೇ ನೆರಳಿನಂತೆ = ಪ್ರತಿಬಿಂಬದಂತೆ ಜ್ಞಾನಾಭಾಸವೇ ಆಗಿರುತ್ತದೆ. ಅದು ಶುದ್ಧ ಜ್ಞಾನವಲ್ಲ. ಆ ಅನುಭವವೂ ಮಿಥ್ಯೆಯೇ. ಇದೇ ವಿಷಯೇಂದ್ರಿಯ ಸಂಯೋಗದಿಂದ ಉಂಟಾಗುವ ಜ್ಞಾನವು. ಇದು ಅನಿತ್ಯವಾದುದು. ಇದನ್ನೇ ಜ್ಞಾನಂಚಪ್ರಕೃತೇರ್ಗುಣಃ ಎಂದು ತಿಳಿಸಿದ್ದಾರೆ.

ಆಗಲೇ ಅಂದರೆ ಚಿದಾಭಾಸನು ಆ ವಿಷಯಾಕಾರವುಳ್ಳ ಬುದ್ಧಿವೃತ್ತಿಯನ್ನು ಪ್ರಕಾಶಪಡಿಸುವ ಅದೇ ಸಮ ಸಮಯದಲ್ಲಿ ಅಲ್ಲೇ ಇರುವ ಬಿಂಬರೂಪದ ಪ್ರತ್ಯಗಾತ್ಮ ಜ್ಯೋತಿಯೂ ಅದನ್ನು ಪ್ರಕಾಶಪಡಿಸುವುದು. ಹೀಗೆ ಬಿಂಬರೂಪ ಪ್ರತ್ಯಗಾತ್ಮನಿಂದ ಹೊಳೆದ ವಸ್ತುಪ್ರಕಾಶವೇ ನಿಜವಾದ ಜ್ಞಾನವಾಗಿರುತ್ತದೆ. ಬುದ್ಧಿವೃತ್ತಿಯಲ್ಲಿನ ವಿಷಯಾಕಾರವು ಚಿದಾಭಾಸನಿಂದ ಹೊಳೆಯುವುದು ಮತ್ತು ನಿಜಾತ್ಮನಿಂದ ಹೊಳೆಯುವುದು ಈ ಎರಡೂ ಸಮ ಸಮಯದಲ್ಲೇ ಆಗುವುದರಿಂದ ಈ ಎರಡಕ್ಕೂ ಭೇದ ತೋರುವುದಿಲ್ಲ ಮತ್ತು ವಸ್ತುವು ಹೊಳೆದುದು = ತಿಳಿದುದು ಮತ್ತು ಅನುಭವ ಗೋಚರವಾದುದು ಎಂಬ ಫಲವು ಒಂದೇ

ಆಗಿರುವುದರಿಂದ ಈ ಏಕಾಕಾರದ ವಸ್ತುಪ್ರಕಾಶವನ್ನು ಜ್ಞಾನ ಎಂದೇ ಪರಿಗಣಿಸುವರು, ವ್ಯವಹರಿಸುವರು. ವಸ್ತುಸ್ಥಿತಿ ಹೀಗಿರುವುದರಿಂದ ಪ್ರತ್ಯಗಾತ್ಮ ಪ್ರಕಾಶವೇ ನಿಜವಾದ ಜ್ಞಾನ ಎಂದು ತಿಳಿಯಬೇಕು. ನೆರಳಿನಂತಹ ಪ್ರತ್ಯಯವು ನಿಜ ಶುದ್ಧ ಜ್ಞಾನವಾಗಿರುವುದಿಲ್ಲ.

ಇಂತಿರಲು ಚಿದಾಭಾಸ = ಜೀವಾತ್ಮನು ಗ್ರಹಿಸಿದ ಜ್ಞಾನವು ಅಂದರೆ ಬುದ್ಧಿವೃತ್ತಿ ಪ್ರಕಾಶವೆಂಬ = ಪ್ರತ್ಯಯರೂಪವು ಜ್ಞಾನಾಭಾಸವೇ. ಅದು ನಿಜವಾದ ಜ್ಞಾನವಲ್ಲ. ಮತ್ತು ಬುದ್ಧಿವೃತ್ತಿಯು ಕ್ಷಣಿಕವಾದ್ದರಿಂದ ಆ ಪ್ರತ್ಯಯವು ಕ್ಷಣದಲ್ಲಿ ಹುಟ್ಟುವುದು, ಕ್ಷಣಾಂತರದಲ್ಲಿ ನಾಶಹೊಂದುವುದು. ಹೀಗೆಂಬುದು ಎಲ್ಲರ ಅನುಭವದಲ್ಲೂ ಇರುವುದು. ಆದ್ದರಿಂದ ಈ ಜ್ಞಾನವು ಶುದ್ಧವೂ ಅಲ್ಲ. ನಿತ್ಯವಾದದೂ ಅಲ್ಲ. ಪ್ರತ್ಯಗಾತ್ಮಜ್ಯೋತಿಯಿಂದ ಹೊಳೆದ ವಸ್ತುಪ್ರಕಾಶವೆ ಸತ್ಯ ಶುದ್ಧಜ್ಞಾನವಾಗಿರುತ್ತದೆ ಅನುಭವವಾಗಿರುತ್ತದೆ. ಆದ್ದರಿಂದ ನಿಜದಲ್ಲಿ ಅರಿಯುವವನು = ಜ್ಞಾತೃವು ನಿಜಾತ್ಮನೇ = ಪ್ರತ್ಯಗಾತ್ಮನೇ ಆಗಿರುತ್ತಾನೆ. ಅವನೇ ಸರ್ವಜ್ಞನು. ಜೀವಾತ್ಮನು ನಿಜವಾದ ಜ್ಞಾತೃ ಅಲ್ಲವೇ ಅಲ್ಲ. ಆದರೆ ಮನುಷ್ಯಚೇತನನು ಅಧ್ಯಾಸದಿಂದಿರುವ ಪ್ರಮಾತೃ ವಾಗಿರುವುದರಿಂದ ನಾನು ಅರಿತೆ = ತಿಳಿದೆ ಎಂದು ಭಾವಿಸಿಕೊಂಡಿರುತ್ತಾನೆ. ತನ್ನ ಮನಸ್ಸಿನಲ್ಲಿ ಹೊಳೆದ ವಸ್ತುಪ್ರಕಾಶವನ್ನೇ ಜ್ಞಾನ ಎಂದು ನಂಬಿಕೊಂಡಿರುತ್ತಾನೆ. ಅದು ಮನಸ್ಸಿನಲ್ಲಾಗುವ ಜ್ಞಾನ ಪ್ರತೀತಿಯಾಗಿದೆ. ಅದು ಅನಿತ್ಯವಾದ ಜ್ಞಾನವು. ಆತ್ಮಜ್ಞಾನವು ನಿತ್ಯವಾದುದು. ನಿಜವಾದ ಶುದ್ಧಜ್ಞಾನ ಎಂದರೆ ಪ್ರತ್ಯಗಾತ್ಮನ ಪ್ರಕಾಶಪ್ರಕಾರವೇ ಆಗಿರುತ್ತದೆ. ಇದೇ ನಿಜವಾದ ಜ್ಞಾನ ಅನುಭವವಾಗಿರುತ್ತದೆ. ಅಂದಾಗ ಆತ್ಮಾ - ಜ್ಞಾನ ಎನ್ನುವುದು ಬೇರೆಬೇರೆ ಅಲ್ಲ. ಒಂದೇ ತತ್ತ್ವವು. ಇದನ್ನೇ ಉಪನಿಷತ್ತಿನಲ್ಲಿ ಪ್ರತಿಬೋಧವಿದಿತಂ ಮತಂ ಎಂದು ತಿಳಿಸಿದೆ. ಅಂದರೆ ಪ್ರತಿಯೊಂದು ಜ್ಞಾನವು ಉಂಟಾದಾಗಲೂ (ನಾನು, ನೀನು, ಇದು, ಅದು ಎಂದು ತಿಳಿಯುವಾಗ) ಪ್ರತ್ಯಗಾತ್ಮನ ಜ್ಞಾನಪ್ರಕಾಶವೇ ಅನುಭವ ಗೋಚರವಾಗುವುದು ಎಂದರ್ಥ. ಇಂತು ಪ್ರಕಾಶಸ್ವರೂಪದ ಜ್ಞಾನವೇ ಆತ್ಮನು ಎಂದು ತಿಳಿಯಬೇಕು. ಅವನೇ ಸರ್ವಜ್ಞ ಬ್ರಹ್ಮ ಚೈತನ್ಯ ಎಂದೂ ಅರಿಯಬೇಕು.



## ಅಧ್ಯಾರೋಪ - ಅಪವಾದನ್ಯಾಯ ಪರಿಚಯ

ಬ್ರಹ್ಮಚೈತನ್ಯವೇ ಆಗಿರುವ ಈಶ್ವರನು ಮಾಯೆಯನ್ನು ಉಪಾಧಿಯನ್ನಾಗಿ ಸ್ವೀಕರಿಸಿ ಜಗತ್ಸೃಷ್ಟಿಯನ್ನು ಮಾಡಿರುವನೆಂದು ಹೇಳುವುದೇ ಅಧ್ಯಾರೋಪವು. ಮಾಯೆ ಎಂದರೆ ಈಶ್ವರನ ಇಚ್ಛೆಯು. ಅದೇ ಅವನ ಶಕ್ತಿಯಾಗಿರುತ್ತದೆ. ಇಚ್ಛೆ ಎಂಬುದು ಅವನ ಜ್ಞಾನದ

ಪ್ರಕಾರವೇ ಆಗಿರುತ್ತದೆ. ಅದು ಬೇರೆ ವಸ್ತು ಆಗಿರುವುದಿಲ್ಲ. ಇಚ್ಛಾಮಾತ್ರಂ ಪ್ರಭೋಃ ಸೃಷ್ಟಿ ಎಂದೇ ತಿಳಿಸಿಕೊಟ್ಟಿದ್ದಾರೆ. ಈಶ್ವರನ ಇಚ್ಛೆ - ಸಂಕಲ್ಪ ಆಗುತ್ತಿದ್ದಂತೆಯೇ ಜಗತ್‌ಸೃಷ್ಟಿ ಆಗುವುದು. ಈಶ್ವರನು ಸ್ವ ಇಚ್ಛೆಯಿಂದ ಮಾಯೆಯನ್ನು ಉಪಾಧಿಯಾಗಿ ಸ್ವೀಕರಿಸಿರುವುದರಿಂದ ಅದು ಈಶ್ವರನಿಗೆ ಬಂಧಕವಾಗುವುದಿಲ್ಲ. ಅವನು ಸ್ವಯಂಸಿದ್ಧ ಸ್ವರೂಪ ಜ್ಞಾನಪ್ರಕಾಶವನಾದ್ದರಿಂದ ಸ್ವತಂತ್ರನೂ ನಿತ್ಯ ಶುದ್ಧ ಬುದ್ಧ ಮುಕ್ತ ಸ್ವಭಾವನೇ ಆಗಿರುತ್ತಾನೆ. ಇಂತು ಈಶ್ವರಾತ್ಮನು ಸೃಷ್ಟಿಕರ್ತಾ ಆದುದೇ ಆತ್ಮನಿಗೆ ಒಂದು ವಿಶೇಷಸ್ಥಿತಿ ಆಗಿರುತ್ತೆಂಬುದೇ ಅಧ್ಯಾರೋಪವಾಗಿರುತ್ತದೆ. (ಇದು ಸಾತ್ವಿಕ ಬುದ್ಧಿಯಿಂದ = ಶಾಸ್ತ್ರದಿಂದ ಕಲ್ಪಿತವಾದುದು)

ಈಶ್ವರನು ವಿತಕ್ಕೆ ಸೃಷ್ಟಿಮಾಡಿರುತ್ತಾನೆಂದರೆ - ಮುಕ್ತರಾಗದೇ ಅಜ್ಞಾನಿಗಳಾಗಿರುವ ಜೀವಾತ್ಮರು ನಾನಾ ಬಗೆಯ ಪುಣ್ಯ ಪಾಪ ಕರ್ಮಗಳನ್ನು ಮಾಡಿರುತ್ತಾರಲ್ಲವೇ, ಅವರಿಗೆ ಆಯಾಯಾ ಕರ್ಮಗಳ ಫಲವನ್ನು ಕೊಡಬೇಕಾದ ಸ್ವಾಮಿಯು ಅವನೇ ಆಗಿರುವುದರಿಂದ ಅವನು ಜೀವರ ಕರ್ಮಾನುಗುಣವಾಗಿ ಸೃಷ್ಟಿ ಸಂಕಲ್ಪರೂಪ ಮಾಯೆಯಿಂದಲೇ ಜಗತ್‌ಸೃಷ್ಟಿಮಾಡಿ ಜೀವರಿಗೆ ಭೋಗಾಯತನಗಳನ್ನು (ಶರೀರಗಳನ್ನು) ಭೋಗೋಪಕರಣಗಳನ್ನು (ಮನೋಬುದ್ಧಿ ಇಂದ್ರಿಯ ಪ್ರಾಣಗಳನ್ನು) ನಾಮರೂಪ ಶಬ್ದಾದಿ ವಿಷಯಗಳನ್ನು = ಭೋಗ್ಯವಸ್ತುಗಳನ್ನು ಸೃಜಿಸಿ ಒದಗಿಸಿಕೊಟ್ಟಿರುವನು. ಜಾದೂಗಾರನು ಅಥವಾ ಮಂತ್ರಸಿದ್ಧಿಯಿರುವ ಯೋಗಿಯು ಬೇರೆ ಉಪಕರಣವಸ್ತು ಅಪೇಕ್ಷೆಯಿಲ್ಲದೇ ಸ್ವ ಇಚ್ಛಾಮಾತ್ರದಿಂದ ಸ್ವತಂತ್ರವಾಗಿ ಹೇಗೆ ವಸ್ತುಸೃಷ್ಟಿ ಮಾಡಬಲ್ಲವನಾಗಿರುತ್ತಾನೆಯೋ ಹಾಗೆಯೇ ಸರ್ವಜ್ಞ ಸರ್ವಶಕ್ತನಾದ ಈಶ್ವರನು ಮಾಯೆಯಿಂದ ಪ್ರಪಂಚವನ್ನು ಸೃಜಿಸಿರುವನು. ಅಂದಾಗ ಪ್ರಪಂಚವು ಮಾಯಿಕವಾಗಿದೆ. ಪರಮಾರ್ಥವಾದುದಲ್ಲ. ನಿಜವಾಗಿ ಈಶ್ವರನು ಸೃಷ್ಟಿಮಾಡಿಲ್ಲ. ಹೀಗೆಂದು ವಿಚಾರದಿಂದ - ಯುಕ್ತಿ ಶಾಸ್ತ್ರ ಪ್ರಮಾಣಗಳಿಂದ ತಿಳಿಯುವುದೇ ಅಪವಾದವು. ವಾಸ್ತವಾಂಶವು ಹೀಗಿರುವುದರಿಂದ ಪರಮಾತ್ಮನ ಅದ್ವೈತ ನಿತ್ಯ ಶುದ್ಧ ಬುದ್ಧ ಮುಕ್ತ ಪರಮಾನಂದಸ್ವರೂಪಸ್ಥಿತಿಗೆ ಎಂದೂ ವಿನೂ ಚ್ಯುತಿಯಿಲ್ಲ. ಹೀಗೆಂಬ ನಿರುಪಾಧಿಕ ಬ್ರಹ್ಮ ಆತ್ಮನ ಪರಮಾರ್ಥ ಸ್ಥಿತಿಯನ್ನು ವಿವೇಕ = ಸಾತ್ವಿಕ ಬುದ್ಧಿಯಿಂದ = ವಿಚಾರದಿಂದ ಅಂದರೆ ಮನುಷ್ಯನು ಸ್ವಾನುಭವದಿಂದ ಗೊತ್ತುಮಾಡಿಕೊಳ್ಳುವುದಾಗಿರುತ್ತದೆ. ಹೀಗೆ ಪರಮಾತ್ಮ = ನಿರುಪಾಧಿಕ ಚೈತನ್ಯ - ಬ್ರಹ್ಮಪಕ್ಷಕ್ಕೆ ಅಧ್ಯಾರೋಪ ಅಪವಾದನ್ಯಾಯವು ಸಮನ್ವಿತವಾಗಿದೆ.

ಇನ್ನು ಜೀವಾತ್ಮ ಪಕ್ಷದಲ್ಲಿ ತಿಳಿದುಕೊಳ್ಳಬೇಕಾದ್ದೇನೆಂದರೆ ಸ್ವಸ್ವರೂಪ

ಈ ಲೋಕದಲ್ಲಿ ಜನ್ಮವನ್ನು ಪಡೆಯುವರು. ಹೀಗೆಂಬುದು ಕರ್ಮಶಾಸ್ತ್ರದ ಸಿದ್ಧಾಂತ. ತರ್ಕ-ನ್ಯಾಯ ಮತ್ತು ಅನುಭವ ಪ್ರಕಾರದಿಂದಲೂ ಇದನ್ನು ಒಪ್ಪಬಹುದಾಗಿದೆ. ಅಂದಾಗ ಜೀವರ ದೇಹಗಳು ಕರ್ಮಾನುಗುಣವಾಗಿ ಈ ಲೋಕದಲ್ಲಿ ಹೊಸ ಹೊಸದಾಗಿ ಹುಟ್ಟುವುವು. ಜೀವಾತ್ಮರು ಹೊಸದಾಗಿ ಹುಟ್ಟುವುದಿಲ್ಲ. ಕರ್ಮ ಕರ್ತೃ ಜೀವಾತ್ಮನು ಪೂರ್ವದಲ್ಲಿ ಇರಲೇಬೇಕಷ್ಟೆ (ಇದೇ ಯುಕ್ತಿ). ಆ ಜೀವರು ಸ್ವಯಂಪ್ರಕಾಶ ಪ್ರತ್ಯಗಾತ್ಮನ ಪ್ರತಿಬಿಂಬವಾಗಿರುವುದರಿಂದ ಉಪಾಧಿರೂಪದ ಆ ಹೊಸ ಶರೀರಗಳಲ್ಲಿ ನಾನು ನಾನು ಎಂದು ಹೊಳೆಯಲು ಆರಂಭಿಸುವರು ಅಷ್ಟೆ! ಬಿಂಬರೂಪದ ಏಕೈಕ ನಿಜ ಆತ್ಮನು = ಪ್ರತ್ಯಗಾತ್ಮನು ನಿತ್ಯವಾಗಿರುವುದರಿಂದ ಆ ಶರೀರಾದಿಗಳಿಗೆ ಕಾರಣ ಅಧಿಷ್ಠಾನ ಕೇವಲ ಸಾಕ್ಷಿ-ಸನ್ನಿಧಿಮಾತ್ರದಿಂದ ಆ ದೇಹಾದಿಗಳಿಗೆ ಚಿಚ್ಛಕ್ತಿ ಕೊಡುತ್ತಾ ಪ್ರೇರಕನಾಗಿರುತ್ತಾನೆ. ಈ ಪ್ರಪಂಚದ ಸಕಲ ಪ್ರಾಣಿಗಳ ವ್ಯವಹಾರಗಳಿಗೂ ಸೂರ್ಯನು ಬೆಳಕು ಕೊಡುತ್ತಾ ಸಾಕ್ಷಿಯಾಗಿ ಪ್ರೇರಕನಾಗಿರುವಂತೆ ಎಂದು ತಿಳಿಯಬೇಕು. ಪ್ರಾಣಿಗಳ ಗರ್ಭೋತ್ಪತ್ತಿಯ ಪ್ರಾರಂಭದಲ್ಲೇ, ಬೆಳಕಿನಂತೆ-ಆಕಾಶದಂತೆ ಸರ್ವತ್ರವ್ಯಾಪ್ತನಾದ ಚಿಚ್ಛಕ್ತಿಸ್ವರೂಪದ ಸತ್ಯ-ಆತ್ಮನು ಆ ಹೊಸ ಶರೀರಗಳಲ್ಲಿ ಪ್ರತಿಬಿಂಬ ರೂಪದಿಂದಲೂ ಮತ್ತು ಸಾಕ್ಷಾತ್‌ಸ್ವರೂಪದಿಂದಲೂ ತುಂಬಿಕೊಳ್ಳುವನು. ಅಂತರ್ಯಾಮಿಯಾಗಿರುವನು. ಈ ಪ್ರತ್ಯಗಾತ್ಮನು ಬೆಳಕಿನಂತೆ ಅವಿಕಾರಿಯಾಗಿಯೇ ಇರುತ್ತಿದ್ದು, ಸಾಕ್ಷೀ ಬಿಂಬರೂಪದಿಂದ ಇರುತ್ತಿದ್ದು ಆಯಾಯಾ ದೇಹೇಂದ್ರಿಯಗಳಲ್ಲಿ ಪ್ರತಿಬಿಂಬ ರೂಪದಿಂದ ಹೊಳೆಯುತ್ತಾ ಅಂದರೆ ನಾನು ನಾನು ಎಂಬ ಜ್ಞಾನರೂಪದಿಂದ ತೋರಿಕೊಳ್ಳುತ್ತಾ ಇರುತ್ತಾನೆ. ಈ ನಾನು ಎಂಬ ಚಿದಾಭಾಸನು ಜೀವಾತ್ಮನು ಸತ್ಯಾನೃತ ರೂಪದಿಂದಿರುವನು. (ಸಾಕ್ಷೀ ರೂಪದಿಂದ ಸತ್ಯ. ಅಹಂಕಾರ ರೂಪದಿಂದ ಮಿಥ್ಯ) ತಾಮಸಬುದ್ಧಿಕಲ್ಪಿತನಾದ ಈ ನಾನು ಎಂದುಕೊಳ್ಳುವ ಚಿದಾಭಾಸನೇ ಜೀವಾತ್ಮನು ಎಂದು ತಿಳಿಯಬೇಕು. ಇವನು ನಿಜ ಆತ್ಮನ ಪ್ರತಿರೂಪ-ಪ್ರತಿಬಿಂಬ (ಅವಸ್ತುರೂಪ) ಆಗಿರುತ್ತಾನೆ. ಶಕ್ತಿರೂಪದ ಮಾಯೆಯು ಈಶ್ವರ ಸಾಂನ್ನಿಧ್ಯದಲ್ಲಿ ಚೈತನ್ಯಗೊಂಡಿರುವಂತೆ ಈ ಚಿದಾಭಾಸರೂಪದ ನಾನು ಎಂಬ ಮಿಥ್ಯಾತ್ಮನೂ ಚಿದ್ ವ್ಯಾಪ್ತಿಯಿಂದ ಚೈತನ್ಯಗೊಂಡು ಚೇತನನಂತೆ ತೋರಿಕೊಂಡಿರುವನು. ಈ ಮಿಥ್ಯಾತ್ಮನೂ ಮತ್ತು ನಿಜ ಆತ್ಮನೂ ಈ ಇಬ್ಬರೂ ಪ್ರಕಾಶೈಕ ಸ್ವಭಾವದವರಾಗಿರುವುದರಿಂದ ಇವರಲ್ಲಿ ಭೇದವು ತೋರುವುದಿಲ್ಲ. ಎರಡು ಬೆಳಕುಗಳು ಒಟ್ಟಾಗಿರುವಾಗ ಭೇದ ತೋರುವುದಿಲ್ಲವಷ್ಟೆ! ಹಾಗೆಯೇ ಇದು. ಪ್ರಸಂಗ ಹೀಗಿರುವುದರಿಂದ ಜೀವಾತ್ಮನ ತಾಮಸ ಬುದ್ಧಿಯಿಂದಲೇ ಆತ್ಮಾನಾತ್ಮರ ಅಭೇದಾಧ್ಯಾಸ ಉಂಟಾಗುವುದು. ಹೀಗೆ ಜೀವಾತ್ಮನಿಗೆ ಅಭೇದ ಭಾವನೆ

ಉಂಟಾಗುವುದರಿಂದಲೇ ಮನುಷ್ಯರಿಗೆ ದೇಹೇಂದ್ರಿಯ ಸಂಘಾತವೇ ನಾನು ಎಂಬ ಅಧ್ಯಾಸರೂಪ ಭಾವನೆಯುಂಟಾಗಿರುವುದು. ಇದೇ ಕಾರ್ಯೋಪಾಧಿಯಿಂದ ಆತ್ಮಚೈತನ್ಯಕ್ಕೆ ಆಗಿರುವ ಜೀವಾತ್ಮ ಎಂಬ ವಿಶೇಷರೂಪವು. ಮನುಷ್ಯನು ದೇಹಾದಿಗಳೇ ನಾನು ಎಂದು ತಿಳಿದುಕೊಂಡಿರುವುದೇ ಅಧ್ಯಾರೋಪವಾಗಿರುತ್ತದೆ. ಇದು ನಿಜ ಆತ್ಮನಿಗೆ ಇನ್ನೊಂದು ಬಗೆಯ ವಿಶೇಷಸ್ಥಿತಿಯಾಗಿರುತ್ತದೆ. ಕೆಂಪು, ಹಳದಿ ಮುಂತಾದ ಬಣ್ಣಗಳನ್ನು ಪ್ರಕಾಶಪಡಿಸುವಾಗ ಪ್ರಕಾಶವೇ ಪರಿಣಾಮಗೊಂಡಂತೆ ತೋರುವುದಲ್ಲವೇ! ಹಾಗೆಯೇ ಈ ಚಿದಾಭಾಸನು ಲೋಕವ್ಯವಹಾರದಲ್ಲಿ ಪರಿಣಾಮಗೊಂಡಂತೆ ತೋರುವನು. ಆದರೆ ಬಿಂಬರೂಪದ ನಿಜ ಆತ್ಮನು ಕಿಂಚಿತ್ತುಕೂಡಾ ಪರಿಣಾಮಗೊಳ್ಳುವುದಿಲ್ಲ, ಶುದ್ಧ ಕೂಟಸ್ಥ ಸಾಕ್ಷಿಯಾಗಿಯೇ ಇರುತ್ತಾನೆ. ಈ ಚಿದಾಭಾಸರೂಪದ ಜೀವಾತ್ಮನು ದೇಹೆಂದ್ರಿಯಗಳೊಂದಿಗೆ ಅನ್ಯೋನ್ಯವಾಗಿ ಆರೋಪ-ಅಧ್ಯಾಸದಿಂದಿದ್ದುಕೊಂಡು ನಾನು ದೇಹೀ. ಮನುಷ್ಯ ಸಂಸಾರೀ ಎಂದು ತಿಳಿದುಕೊಂಡಿರುತ್ತಾನೆ. ಭ್ರಾಂತಿಯಿಂದಿರುತ್ತಾನೆ. ಇದೇ ಅಧ್ಯಾರೋಪವು. ಇದು ಜೀವಾತ್ಮನ ತಾಮಸಬುದ್ಧಿಯಿಂದ ಕಲ್ಪಿತವಾದುದು. ಇದು ತಪ್ಪು ತಿಳುವಳಿಕೆಯಾಗಿದೆ. ಆದ್ದರಿಂದಲೇ ಇದು ಬಾಧೆಗೆ ಅರ್ಹವಾದುದು.

ಇನ್ನು ಇದಕ್ಕೆ ಅಪವಾದ ಹೇಗೆಂದರೆ :- ಪ್ರತ್ಯಗಾತ್ಮನು = ಚೇತನನು ಅರಿಯುವವನಾಗಿರುತ್ತಾನೆ. ದೇಹೇಂದ್ರಿಯ ಮನೋಬುದ್ಧಿಗಳು ಜಡಪ್ರಕೃತಿಯ ಕಾರ್ಯಗಳಾಗಿದ್ದು ಅವೂ ಜಡವಸ್ತುಗಳೇ ಆಗಿರುತ್ತವೆ. ಅವಕ್ಕೆ ಅರಿವು ಇರುವುದಿಲ್ಲ. ಕತ್ತಲೆಯಂತೆ ಜಡವಸ್ತುವು. ಬೆಳಕಿನಂತೆ ಚೇತನವಸ್ತುವು. ಬೆಳಕು ಕತ್ತಲೆಗಳು ಹೇಗೆ ಬೇರೆ ಬೇರೆಯಾಗಿರುವುವೋ ಹಾಗೆಯೇ ಚೇತನ ಆತ್ಮನೇ ಬೇರೆ. ಜಡ ದೇಹಾದಿಗಳೇ ಬೇರೆ. ಆತ್ಮನು ವಿಷಯೀ = ಅರಿಯುವವನು. ದೇಹಾದಿಗಳು ಜಡ ವಿಷಯಗಳು = ಅರಿಯಲ್ಪಡತಕ್ಕವು. ಅವು ಏನನ್ನೂ ಅರಿಯುತ್ತಿರುವುದಿಲ್ಲ, ಆದ್ದರಿಂದ ಎಲ್ಲವನ್ನೂ ಅರಿಯುತ್ತಿರುವ ಮನುಷ್ಯನು ತಾನು = ನಿಜ ಆತ್ಮನು. ದೇಹ ಅಲ್ಲ, ಪ್ರಾಣ ಅಲ್ಲ, ಇಂದ್ರಿಯಗಳೂ ಅಲ್ಲ, ಮನಸ್ಸೂ ಅಲ್ಲ, ಬುದ್ಧಿಯೂ ಅಲ್ಲ, ನಾನು ಎಂದು ಬಗೆಯುವ ಅಹಂಕಾರವೂ ಅಲ್ಲ, ಮತ್ತು ಅವುಗಳಲ್ಲಿ ಪ್ರತಿಬಿಂಬಗೊಂಡಿರುವ ಪ್ರಕಾಶದಂತಿರುವ ಚಿದಾಭಾಸ ಮಿಥ್ಯಾತ್ಮನೂ ತಾನಲ್ಲ, ಹೀಗೆಂದು ಆತ್ಮಾನಾತ್ಮವಿವೇಚನೆ = ವಿವೇಕದಿಂದ (ಸಾತ್ವಿಕಬುದ್ಧಿಯಿಂದ) ಅಲ್ಲಗಳೆದುಕೊಳ್ಳುವುದೇ ಅಪವಾದವು. ಅಂದರೆ ಅರಿವು ಉಳ್ಳ ಮನುಷ್ಯನು ತಾನು ಪ್ರತ್ಯಗಾತ್ಮನೇ = ಸತ್ಯ ಎಂದು ನಿಷೇಧಶೇಷವಾಗಿ ಉಳಿದುಕೊಳ್ಳುವುದೇ = ನಿಶ್ಚಯ ಸ್ವಾತ್ಮಾನುಭವವೇ ಅಪವಾದ. ಈ ರೀತಿ ವಿವೇಚನೆ = ವಿವೇಕ ಅನುಭವ

ಪ್ರಮಾಣದಿಂದ ದೇಹಾದಿಗಳನ್ನು ಅಪೋಹ ಮಾಡಿ ದೂರೀಕರಿಸಿಕೊಳ್ಳುವ ಮನುಷ್ಯನು ತಾನೇ ಪ್ರತ್ಯಗಾತ್ಮನಾಗಿರುತ್ತಾನೆ. ಈ ನಿಜ ಆತ್ಮನು ಅದ್ವಿತೀಯ ಚೈತನ್ಯನೇ ಜ್ಞಾನಾನುಭವ ಸ್ವಭಾವದವನೇ ಆಗಿರುತ್ತಾನೆ. ಹೀಗೆಂದು ವಸ್ತುವಿವೇಕದಿಂದ ನಿಶ್ಚಯಜ್ಞಾನ = ಅನುಭವಕ್ಕೆ ತಂದುಕೊಳ್ಳುವುದೇ ಅಪವಾದವು. ಈ ರೀತಿಯಾಗಿ ಜೀವಾತ್ಮಪಕ್ಷದಲ್ಲಿ ಅಧ್ಯಾರೋಪ ಅಪವಾದನ್ಯಾಯವು ಸಮನ್ವಿತವಾಗಿರುತ್ತದೆ. ಅಂದಾಗ ಸಾತ್ವಿಕ ಬುದ್ಧಿಯಾದ ವಿವೇಕವೆಂಬ ಬೆಳಕಿನಲ್ಲಿ (ಸ್ವಾನುಭವದಿಂದ) ನಾನು ಆತ್ಮನು = ನಿತ್ಯ ಶುದ್ಧ ಬುದ್ಧ ಮುಕ್ತ ಸ್ವಭಾವನೇ ಬ್ರಹ್ಮವೇ ಆಗಿರುತ್ತೇನೆಂದು ನಿರ್ಣಯಮಾಡಿಕೊಳ್ಳುವುದೇ ಸಮ್ಯಗ್ ಜ್ಞಾನವಾಗಿರುತ್ತದೆ. ಇದೇ ಸ್ವಾನುಭವದಿಂದ ಸತ್ಯಪರಮಾರ್ಥವನ್ನು ಕಂಡುಕೊಳ್ಳುವ ಪರಿಯಾಗಿರುವುದು. ಇದೇ ಪರಮಾರ್ಥ ಸತ್ಯದರ್ಶನವು. ಸ್ವಾತ್ಮದರ್ಶನವು.



## ಬ್ರಹ್ಮೋಪದೇಶ ಅಥವಾ ಆತ್ಮಪ್ರತಿಪಾದನೆಯ ಸಂಪ್ರದಾಯ

ಉಪಾಸ್ಯಬ್ರಹ್ಮ = ಸೋಪಾಧಿಕ ಸ್ವರೂಪ = ಸಗುಣ ಚೈತನ್ಯ = ಸವಿಶೇಷ
ಜ್ಞೇಯ ಬ್ರಹ್ಮ = ನಿರುಪಾಧಿಕ ಸ್ವರೂಪ = ನಿರ್ಗುಣ ಚೈತನ್ಯ = ನಿರ್ವಿಶೇಷ

ಬ್ರಹ್ಮಚೈತನ್ಯವು ನಿರುಪಾಧಿಕ ನಿರ್ವಿಶೇಷ ಜ್ಞಾನಸ್ವರೂಪದ ಏಕೈಕ ಚೇತನನಾಗಿದ್ದರೂ ಶಾಸ್ತ್ರವು ಅವನನ್ನು ಪ್ರತಿಪಾದನೆ ಮಾಡುವಾಗ, ಉಪದೇಶ ಮಾಡುವಾಗ ಸರ್ವಜ್ಞ, ಸರ್ವಶಕ್ತ, ಜಗತ್‌ಸೃಷ್ಟಿಕರ್ತಾ ಎಂದು ತಿಳಿಸುತ್ತಾ ಅವನ ವಿಶೇಷ ರೂಪವನ್ನೇ ವರ್ಣಿಸುವುದು. ಇದು ಸರ್ವಂ ಖಲ್ವಿದಂ ಬ್ರಹ್ಮ ಎಂಬ ಪ್ರತಿಪಾದನೆಗೆ ಅನುಗುಣವಾಗಿರುತ್ತದೆ. ಆದರೆ ಅವನ ನಿರ್ವಿಶೇಷ ಸ್ಥಿತಿಯನ್ನು ಅಪವಾದ ನ್ಯಾಯದಿಂದ ತಿಳಿಸಿಕೊಡುತ್ತಿರುವುದು. ಅಂದಾಗ ಈ ಕ್ರಮದಿಂದ ಒಬ್ಬ ಚೇತನನಲ್ಲೇ ನಿರುಪಾಧಿಕಸ್ಥಿತಿ ಮತ್ತು ಸೋಪಾಧಿಕಸ್ಥಿತಿ ಎಂಬ ಎರಡು ಸ್ಥಿತಿಗಳ ಪರಿಚಯ ಮಾಡಿಕೊಟ್ಟಂತಾಗುವುದು. ಆದರೆ ನಾವು ತತ್ತ್ವಗ್ರಹಣೆ ಮಾಡುವಾಗ ಈ ಎರಡು ಸ್ಥಿತಿಗಳೂ ಸತ್ಯ ಪರಮಾರ್ಥ ಎಂದು ತಿಳಿಯುವಂತಿಲ್ಲ, ಏಕೆಂದರೆ ಉಪಾಧಿಮೂಲಕವಾದ ವಿಶೇಷ ಸ್ಥಿತಿಯು ಸ್ವಾಭಾವಿಕ ಅಲ್ಲ, ವಾಸ್ತವವಲ್ಲ, ಉಪಾಧಿ (ಕಲ್ಪನೆ) ಇದ್ದಾಗ ಮಾತ್ರವೇ ಆ ವಿಶೇಷ ರೂಪವಿರುವುದು. ಆ ಉಪಾಧಿಯು ಇಲ್ಲದಾಗ ಅಂದರೆ ಕಲ್ಪನೆಯನ್ನು ವಿವೇಕದಿಂದ ನಿರಾಕರಿಸಿಕೊಂಡಾಗ ಆ ವಿಶೇಷ ರೂಪವಿರುವುದಿಲ್ಲ, ಅಂದಾಗ ಅದು ನಿಜಸ್ಥಿತಿಯಾಗಿರುವುದಿಲ್ಲ, ವಸ್ತುಸ್ಥಿತಿ ಏನೆಂದರೆ ಉಪಾಧಿಯಿಲ್ಲದಾಗಿನ ಸ್ವರೂಪವೇ ಆತ್ಮಚೇತನನ ನಿಜಸ್ಥಿತಿ. ಅದು ನಿರ್ವಿಶೇಷ ಸ್ಥಿತಿಯೇ

ಎಂದು ಗೊತ್ತುಮಾಡಿಕೊಳ್ಳಬೇಕು. ಉಪಾಧಿಯು ಆಗಮಾಪಾಯಿಯೇ ಆಗಿರುತ್ತದೆ. ಅದು ನಿತ್ಯವಸ್ತು ಆಗಿರುವುದಿಲ್ಲ. ಅವಿದ್ಯಾಮಾಯಾಕೃತವೇ ಕಲ್ಪಿತವೇ. ಅಂದರೆ ಮಿಥ್ಯೆಯೇ ಆಗಿರುತ್ತದೆ. ಹಾಗೆ ನಿರ್ವಿಶೇಷ ಸ್ಥಿತಿಯಿಂದಿರುವ ಚೇತನನೇ ನಿಜ ಆತ್ಮನು = ಪ್ರತ್ಯಗಾತ್ಮನು ಎಂದು ಗ್ರಹಿಸಬೇಕು. ಅವನೇ ಪರಬ್ರಹ್ಮನೆಂದು ಅರಿತುಕೊಳ್ಳಬೇಕು.

ಹೀಗೆ ಏಕಚೇತನನಲ್ಲಿ ಅವ್ಯಕ್ತ ಮಾಯೋಪಾಧಿಯಿಂದ ಇರುವ ಈಶ್ವರ-ಸೃಷ್ಟಿಕರ್ತಾ ಎಂಬುದು ಹೇಗೆ ವಿಶೇಷಸ್ಥಿತಿಯೋ ಹಾಗೆಯೇ ಅದೇ ಚೇತನನಲ್ಲಿ ಅವಿದ್ಯಾಕೃತ ಕರ್ಮ ವ್ಯಕ್ತಕಾರ್ಯ ದೇಹೋಪಾಧಿಯಿಂದ ಇರುವ ಜೀವಾತ್ಮಾ-ಸಂಸಾರೀ ಎಂಬುದೂ ಕೂಡ ಒಂದು ವಿಶೇಷಸ್ಥಿತಿ ಎಂದೇ ಅರಿತುಕೊಳ್ಳಬೇಕು. ಹೀಗೆ ಚೇತನನು ವಿಶೇಷಸ್ಥಿತಿಯಲ್ಲಿರುವುದನ್ನೇ ದ್ವಾರವಮಾಡಿಕೊಂಡು ವಿಚಾರ ವಿವೇಚನೆ = ವಿವೇಕಜ್ಞಾನಯೋಗದಿಂದ ಆ ವಿಶೇಷಗಳನ್ನೆಲ್ಲಾ ಅಪವಾದ = ನಿರಾಕರಣೆ ಮಾಡಿಕೊಂಡು ಆ ನಿರ್ವಿಶೇಷ ನಿರಂಜನ ಬ್ರಹ್ಮದೇವರನ್ನು ಹುಡುಕಿ ಕಂಡುಕೊಳ್ಳಬೇಕು. ಅವನು ಪ್ರತ್ಯಗಾತ್ಮನೇ ಆಗಿರುವುದರಿಂದ (ನಿರ್ವಿಶೇಷ ಆಗಿರುವುದರಿಂದ) ಮಾತು ಮತ್ತು ಮನಸ್ಸುಗಳಿಗೆ ವಿಷಯನಾಗುವುದಿಲ್ಲ. ಗೋಚರನಾಗುವುದಿಲ್ಲ. ಇಂತು ಪರಮಾರ್ಥ ಸ್ವರೂಪವನ್ನು ತಿಳಿಯುವುದಕ್ಕಾಗಿಯೇ ವಿಶೇಷಸ್ಥಿತಿಯನ್ನು ಹೇಳಿದುದೇ ಅಧ್ಯಾರೋಪವು. ಆ ವಿಶೇಷಗಳನ್ನು ಮನುಷ್ಯನು ವಿವೇಚನೆಯಿಂದ ಅಲ್ಲಗಳೆದುಕೊಳ್ಳುವುದೇ ಅಪವಾದವು. ಹೀಗೆ ವಿಚಾರ – ವಿವೇಕವೆಂಬ ಬೆಳಕಿನಿಂದಲೇ (ನಿಶ್ಚಯ = ಸ್ವಾನುಭವದಿಂದಲೇ) ಆತ್ಮನು ತೋರಿಕೊಳ್ಳುವನು. ಅಂದರೆ ಬುದ್ಧಿ ಮನಸ್ಸುಗಳಿಗೆ ಗೋಚರನಾಗದೇ ತಾನೇ ಹೊಳೆಯುವನು. ಇದೇ ಆತ್ಮನ ಸ್ವಯಂಪ್ರಕಾಶವು. ಈ ಅಧ್ಯಾರೋಪ ಅಪವಾದ (ನ್ಯಾಯ) ಕ್ರಮದಿಂದಲೇ ಈ ಅಂತರಾತ್ಮನನ್ನು ಕಂಡುಹಿಡಿಯಬೇಕು. ಈ ಕ್ರಮದಲ್ಲಿ ಬ್ರಹ್ಮೋಪದೇಶ ಮಾಡುವುದೇ ಸಂಪ್ರದಾಯವಾಗಿರುತ್ತದೆ.

ಈ ಸಂಪ್ರದಾಯವನ್ನು ಒಪ್ಪಿಕೊಳ್ಳುವುದರಿಂದ, ಅನುಸರಿಸುವುದರಿಂದ ಬುಭುಕ್ಷು ಮತ್ತು ಮುಮುಕ್ಷು ಎಂಬ ಎರಡು ವರ್ಗದ ಜನರಿಗೂ ಉಪಕಾರವಾಗಿದೆ. ಬುಭುಕ್ಷು ಅಂದರೆ ಭೋಗ ಕಾಂಕ್ಷಿಗಳೆಂದರ್ಥ. ಅಂತಹವರಿಗೆ ತ್ರಿವರ್ಗಸಾಧನೆ (ಧರ್ಮ, ಅರ್ಥ, ಕಾಮ) ಗುರಿಯಾಗಿರುತ್ತದೆ. ಇಂತಹ ಜನರು ಮೇಲಿನ ಸಾಂಪ್ರದಾಯಿಕ ಉಪದೇಶದಿಂದ ಈಶ್ವರಾಸ್ತಿತ್ವವನ್ನು ಗ್ರಹಿಸಿಕೊಂಡು ಈಶ್ವರಾರಾಧನೆಯನ್ನು ಮಾಡಿ ಅವನ ಅನುಗ್ರಹದಿಂದ ತಮ್ಮ ಇಷ್ಟಾರ್ಥಗಳನ್ನು ಪಡೆದುಕೊಳ್ಳುವರು. ಇದರಿಂದ ಲೋಕಸಂಗ್ರಹ ಅಂದರೆ ಲೋಕಸ್ಥಿತಿ ಪಾಲನೆ, ರಕ್ಷಣೆ ಮಾಡಿದಂತಾಗುವುದು. ಇನ್ನು ಮುಮುಕ್ಷುಗಳು = ಉತ್ತಮಾಧಿ

